# ಅಂಕಣ

ತೆಲುಗು ಸಾಹಿತ್ಯದಲ್ಲಿ ದಲಿತ ಸಂವೇದನೆ

ಹರಿಹರಪ್ರಿಯ

ಸಾಹಿತ್ಯ ಜನಪದ ಮಾಧ್ಯಮವಾಗಿ-ಕೆಲವು ಆಲೋಚನೆಗಳು

ಯು. ಎಸ್. ಶ್ರೀಧರ ಆರಾಧ್ಯ

'ಹೊಸ ದಿಗಂತದ ಕಡೆಗೆ' : ಕರ್ವಾಲೋ

ಜಿ. ಪಿ. ಬಸವರಾಜು

ಮೇ—ಜೂನ್ 1986

ಅಂಕಣ

ಮೇ ಸಂಪುಟ : 7
ಜೂನ್ 1986 ಸಂಚಿಕೆ : 5

ಕನ್ನಡದ ಹಿರಿಯಣ್ಣ ಡಾ॥ ಮಾಸ್ತಿ ಅವರು ಇಲ್ಲವಾಗಿದ್ದಾರೆ. ಒಂದು ಪರಂಪರೆಯ ಪರ್ವ ಕೊನೆಗೊಂಡಿದೆ. ಈ ಸಂದರ್ಭದಲ್ಲಿ 'ಅಂಕಣ' ತನ ಮುಂದಿನ ಸಂಚಿಕೆಯನ್ನು 'ಮಾಸ್ತಿ ವಿಶೇಷಾಂಕ'ವಾಗಿ ಪ್ರಕಟಿಸಲಿದೆ. ಇದು ನಮ್ಮ ಓದುಗರಿಗೆ ಪ್ರಿಯವಾಗಬಹುದು.

'ಅಂಕಣ' ಬಳಗದ ಗೆಳೆಯರಿಬ್ಬರು ಹೆಚ್ಚಿನ ಅಧ್ಯಯನಕ್ಕೆ ಅಮೇರಿಕಾಕ್ಕೆ ಹೊರಟಿದ್ದಾರೆ. ಇದು 'ಅಂಕಣ'ಕ್ಕೆ ಸಂತೋಷದ ಸಂಗತಿ. ಡಾ॥ ಕೆ. ವಿ. ನಾರಾಯಣ ಮತ್ತು ಶ್ರೀ ಟಿ. ಎಸ್. ಸತ್ಯನಾಥ್ ಅವರುಗಳಿಗೆ 'ಅಂಕಣ' ಶುಭಪ್ರಯಾಣವನ್ನು ಕೋರುತ್ತದೆ.

'ಅಂಕಣ'

8, 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು-560 003

ಈ ಸಂಚಿಕೆಯಲ್ಲಿ



ಪ್ರಕಟಣೆ : 'ಪಿ. ಪಿ.' ಗೆಳೆಯರ ಬಳಗ
ವಾರ್ಷಿಕ ಚಂದಾ : ಹದಿನೈದು ರೂಪಾಯಿ
'ಅಂಕಣ' ಸ್ಥಾಯಿನಿಧಿ : ನೂರೈವತ್ತು ರೂಪಾಯಿ

# ತೆಲುಗು ಸಾಹಿತ್ಯದಲ್ಲಿ ದಲಿತ ಸಂವೇದನೆ

ಹರಿಹರಪ್ರಿಯ

ಸಂಸ್ಕೃತದ ವಿರುದ್ಧ ಸೆಣಸಿ ದೇಸೀಯ ನುಡಿಗಳ ಏಳಿಗೆಯನ್ನೂ, ಮುಸ್ಲಿಂ ವಿರುದ್ಧ ಸೆಣಸಿ ದೇಸೀಯ ಸಂಸ್ಕೃತಿಗಳ ಬೆಳವಣಿಗೆಯನ್ನೂ–ಕಂಡುಕೊಂಡ ಭಾರತ, ಸಾಮ್ರಾಜ್ಯಷಾಯಿ ಬ್ರಿಟಿಷರ ವಿರುದ್ಧ ಸೆಣಸಿ ಆಧುನಿಕತೆಯ, ಸ್ವಾತಂತ್ರ್ಯದ, ಪ್ರತ್ಯೇಕ ನಾಡುಗಳ ಕಲ್ಪನೆ–ಅರಿವು ತಂದುಕೊಳ್ಳುವಂತಾಯಿತು. ಇದಕ್ಕಾಗಿ 19 ನೇ ಶತಮಾನದ ಆದಿಯಲ್ಲಿಯೇ ರಾಜಾರಾಮ ಮೋಹನರಾಯರಿಂದ ಶುರುವಾದ ಪುನರುಜ್ಜೀವನ ಕಾರ್ಯಕ್ರಮ, ದಾದಾಭಾಯಿನವರೋಜಿ, ಬಾಲಗಂಗಾಧರ ತಿಲಕರವರೆಗೆ ಸಾಗಿತು. ಈ ಮಧ್ಯದಲ್ಲಿ ಬ್ರಹ್ಮಸಮಾಜ, ಆರ್ಯಸಮಾಜ, ಪ್ರಾರ್ಥನಾಸಮಾಜ, ರಾಮಕೃಷ್ಣ ಮಿಷನರಿ, ದಿವ್ಯಸಮಾಜ, ಮುಸ್ಲಿಂಲೀಗ್-ಹೀಗೆ ಹಲವು ಹತ್ತು ನಿಟ್ಟಿನಿಂದ ದೇಸೀಯರ ಸಂಸ್ಕರಣ ಮಾರ್ಗಗಳು ರೂಪುಗೊಂಡವು. ಆದರೆ ಈ ಬಗೆಯ ಪುನರುಜ್ಜೀವನ, ಮತ ಸಂಸ್ಕರಣ ಮಾರ್ಗಗಳಿಗಿಂತ ನೇರವಾಗಿ ಸ್ವಾತಂತ್ರ್ಯ ಸಿದ್ಧಿಯಿಂದ ಮಿಕ್ಕೆಲ್ಲವು ತನಗೆ ತಾನೇ ಸಿದ್ಧಿಸುತ್ತದೆ ಎಂದು ನಂಬಿ,[1] ಸ್ವರಾಜ್ಯವೇ ನಮ್ಮ ಜನ್ಮಸಿದ್ಧ ಹಕ್ಕು ಎಂದು ಘೋಷಿಸಿದ್ದು ಈ 20 ನೇ ಶತಮಾನದ ಆದಿಗೆ, ತಿಲಕ್ ಅವರು.

ತಿಲಕರ ಸ್ವರಾಜ್ಯ ಘೋಷಣೆ ಕೇಳಿಸುವುದಿರಲಿ, ಕಾಂಗ್ರೆಸ್ ಹುಟ್ಟುವ ಮುನ್ನವೇ ರಾಜಾರಾಮ ಮೋಹನರಾಯ, ದಯಾನಂದ ಸರಸ್ವತಿ, ಮಹಾದೇವ ಗೋವಿಂದ ರಾನಡೆ, ರಾಮಕೃಷ್ಣಪರಮಹಂಸ—ವಿವೇಕಾನಂದ, ಅನಿಬೆಸೆಂಟ್ ಮುಂತಾದವರಿಂದ ಹೊರ ಹೊರಟ ಸಂಸ್ಕರಣ ಮಾರ್ಗಗಳು, ಅಲ್ಲಲ್ಲಿನ ಆವಶ್ಯಕತೆಗೆ ತಕ್ಕಂತೆ, ಪರಿಸರಕ್ಕೆ ತಕ್ಕಂತೆ, ಆಧರಿಸಿದ ವ್ಯಕ್ತಿಗಳ ಬಲಾಬಲಕ್ಕೆ ತಕ್ಕಂತೆ–ದೇಶದ ನಾನಾಕಡೆಗಳಲ್ಲಿ ನೆಲೆ ಕಂಡುಕೊಂಡವು. ಕೆಲವೆಡೆ ಎಲ್ಲ ಮಾರ್ಗಗಳ ಸಮನ್ವಯಗೊಂಡು, ಬೇರೊಂದು ಸ್ವರೂಪವನ್ನೇ ತಾಳಿದ್ದುಂಟು. ಅಂತೂ ಗಾಂಧೀಜಿಯ ಪ್ರವೇಶದ ಕಾಲಕ್ಕೆ ದೇಶದಲ್ಲಿ ಹಲವು ಬಗೆಯ ಸಮಸ್ಯೆ, ಸಂದಿಗ್ಧತೆ, ಸಂಕೀರ್ಣತೆ ಆವರಿಸಿತ್ತು. ಕೇವಲ ರಾಜಕೀಯ ಹೋರಾಟ ಒಂದೇ ಅಲ್ಲದೆ; ಧಾರ್ಮಿಕ, ಆರ್ಥಿಕ, ಸಾಮಾಜಿಕ ತಿಕ್ಕಾಟಗಳೂ ತಲೆಎತ್ತಿ ನಿಂತಿದ್ದವು.

---

1. ಸಂಸ್ಕರಣೋದ್ಯಮಾಲು, ಲೇ : ಆರ್. ವಿ. ಆರ್. ಚಂದ್ರಶೇಖರರಾವು, ಗ್ರಂ : "ನೂರೇಳ್ಳ ತೆಲುಗುನಾಡು, ಸಂ: ಕೆ.ಕೆ. ರಂಗನಾಥಾಚಾರ್ಯುಲು", ಪುಟ 7, ಪ್ರ : 1984

ಆಧುನಿಕತೆಯ ವಿರೋಧಿಯಾದ, ಸಂಪ್ರದಾಯ ಶರಣರಾದ, ಬಂಡವಾಳ ಷಾಹಿಗಳಿಂದ ಆಶ್ರಿತರಾದ, ಆಚರಣವಾದಿಯಾದ-ಗಾಂಧೀಜಿ, ಆವರೆಗಿನ ಸಮಸ್ಯೆಗಳ ಜೊತೆಗೆ, ಸಮಕಾಲೀನ ಎಷ್ಟೋ ಸಮಸ್ಯೆಗಳನ್ನು ಎದುರಿಸುವಂತಾಯಿತು. ತಮ್ಮದೇ ಆದ ನೈತಿಕ ನೆಲೆಗಟ್ಟಿನ ಮೇಲೆ ಅವಕ್ಕೆ ಪರಿಹಾರ ಕಂಡುಕೊಂಡು ರಾಜಕೀಯ ಸ್ವಾತಂತ್ರ್ಯವನ್ನು ಕೈಗೆ ತೆಗೆದುಕೊಳ್ಳುವಲ್ಲಿ ಯಶಸ್ವಿಯಾದರು.

ಆದರೆ ಅದುಮಿಟ್ಟಿದ್ದ ಮತಾಂಧತೆ ಒಮ್ಮೆಲೇ ಹೊರಬಿದ್ದು ರಾಷ್ಟ್ರಪಿತ, ಮಹಾತ್ಮ-ಗಾಂಧೀಯನ್ನೇ ಆಹುತಿ ತೆಗೆದುಕೊಂಡಂತೆ. ಹಲವಾರು ಅತೃಪ್ತಿಗಳು, ಸಮಸ್ಯೆಗಳು ದಿನಕ್ರಮೇಣ ಒಂದೊಂದಾಗಿ ಆಕೃತಿ ತಾಳಿ ದೇಶದ ಮುಂದೆ ಎದುರಾದವು.

ಇವುಗಳಲ್ಲಿ ತುಂಬಾ ಪ್ರಬಲವಾದದ್ದು ಅಸ್ಪೃಶ್ಯತೆ ಅರ್ಥಾತ್ ದಲಿತ ಸಮಸ್ಯೆ. ಹಿಂದೂ ಧರ್ಮದೊಂದಿಗೆ ಅಂಟಿಕೊಂಡು ಬಂದ ಕಳಂಕಗಳಲ್ಲಿ ಅನಕ್ಷರಸ್ತತೆ, ಸ್ತ್ರೀ ಶೋಷಣೆ, ಬಡತನ, ಮೌಢ್ಯತೆಗಳಂತೆಯೇ ಈ ಅಸ್ಪೃಶ್ಯತೆಯೂ ಒಂದು (ಹಿಂದೂ ಮಾಡಿದ ಪಂಚ ಮಹಾಪಾತಕಗಳು ಇವು ಎಂದು ನನ್ನ ಅಭಿಪ್ರಾಯ). ಇವನ್ನೇ ನೇತ್ಯಾತ್ಮಕವಾಗಿ ಹೇಳಬೇಕೆಂದರೆ: ವಿದ್ಯೆ, ಭೋಗ, ಸೇವೆ, ಶ್ರೀಮಂತಿಕೆ, ಸಂಪ್ರದಾಯ-ಈ ಐದೂ ತಮ್ಮ ಗುತ್ತಿಗೆ ಎನ್ನುವಂತೆ ಕಾಪಾಡಿಕೊಂಡು ಬಂದವರು ಬೌದ್ಧಿಕಷಾಹಿ, ಭೂಷಾಹಿ, ಬಂಡವಾಳಷಾಹಿ-ಮೇಲು ವರ್ಗಗಳವರು. ಇವೆಲ್ಲಾ ಎಂದೋ ಒಂದು ದಿನ, ಒಂದು ಕ್ಷಣದಲ್ಲಿ ಆವರಿಸಿಕೊಂಡವು ಎಂದಾಗಲಿ, ಅದಕ್ಕೆ ಸಂಪೂರ್ಣ ಮೇಲುವರ್ಗಗಳವರೇ ಕಾರಣೀಭೂತರೆಂದಾಗಲಿ ಚರಿತ್ರೆ ನಮಗೆ ತಿಳಿ ಹೇಳುವುದಿಲ್ಲ. ಆದರೆ ಮತ್ತೆ ಮತ್ತೆ ದೇಶ ಗುಲಾಮಗಿರಿಗೆ ಒಳಗಾಗಲು ಈ ಐದೂ ಅಸ್ಪೃಶ್ಯತೆಗಳೇ ಕಾರಣ ಎಂಬ ಪಾಠವನ್ನು ಮಾತ್ರ ಅದು ಮುಖಕ್ಕೆ ರಾಚುತ್ತದೆ. ಇವತ್ತಿಗೂ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ರಂಗಗಳಲ್ಲಿ ಏಳುವ ಬಿರುಗಾಳಿಗೆ ಈ ಐದೇ ಕಾರಣ ಎಂಬುದನ್ನು ಮನಗಾಣದೆ ಇರಲು ಶಕ್ಯವಿಲ್ಲ.

ಇದನ್ನು ಪೂರ್ವಭಾವಿಯಾಗಿ ಗ್ರಹಿಸಿದ ಕೆಲವು ಮೇಲು ವರ್ಗದ ವ್ಯಕ್ತಿಗಳು, ಈ ಶೋಷಿತರ ಪರ ಅನುಕಂಪ ಪ್ರಕಟಿಸಿದ್ದುಂಟು. ಅವರ ಏಳಿಗೆಗಾಗಿ ಹೋರಾಟ ನಡೆಸಿದ್ದುಂಟು. ಕೆಲವೊಮ್ಮೆ ಆ ಹಿಂದುಳಿದ ಶೋಷಿತರೇ ದನಿ ಎತ್ತುವ ಪ್ರಸಂಗ ಕೂಡಾ ಬಾರದೇ ಹೋಗಲಿಲ್ಲ. ಆದರೂ ಮೇಲುವರ್ಗದವರ ಸುವ್ಯವಸ್ಥಿತ ಕೋಟೆಯನ್ನು ಭೇದಿಸಲು ಶೋಷಿತರಿಂದ ಆಗದೇ ಇರುವುದಕ್ಕೆ ಅವರಲ್ಲಿರುವ ಅಸಂಘಟನೆ, ಅಜ್ಞಾನ, ಅಂಜುಗುಳಿತನ, ಆಮಿಷಕ್ಕೆ ಬಲಿಯಾಗುವಿಕೆ, ಗುಲಾಮಗಿರಿತನ-ಈ ಪಿಡುಗುಗಳೇ ಕಾರಣ ಇರಬಹುದೇದು ನನಗೆ ತೋಚುತ್ತಿದೆ. (ಶೋಷಿತರ ಪರ ಅನುಕಂಪದ-ಹೋರಾಟ ನಡೆಸಿದವರ ಬದುಕಿಗೂ ಆಘಾತವಾದದ್ದು ಉಂಟಷ್ಟೆ: ಅದಕ್ಕೆ ಮೇಲುವರ್ಗದವರ ಹಿಂಸೆ ಎಷ್ಟು ಕಾರಣವೋ-ಶೋಷಿತರ ಅಸಹಕಾರ

ಕೂಡ ಕಾರಣ ಎಂಬುದನ್ನು ಇವತ್ತಿನ ಪರಿಸ್ಥಿತಿಯಲ್ಲಿಯೂ ನಾವು ಕಾಣಬಹುದು. ಉದಾಹರಣೆಗೆ, ಸ್ವಜಾತಿ ವಿರುದ್ಧ ಬಂಡಾಯ, ಅಂತರ ಜಾತಿ ವಿವಾಹ ...)

ಇವೆಲ್ಲವನ್ನೂ ಒಮ್ಮೆಲೇ ಪರಿಹರಿಸುವ ದಾರಿಯಾಗಲಿ, ಒಂದರಿಂದ ಮತ್ತೊಂದು ಬಗೆ ಹರಿಯುತ್ತದೆ ಎನ್ನುವುದಾಗಲಿ (ಕಮ್ಯುನಿಸ್ಟರು ವರ್ಗ ಹೋರಾಟದಿಂದ ಎಲ್ಲ ಸಾಧಿತವಾಗುತ್ತದೆ ಎಂದು ನಂಬುವಿಕೆ) ಭಾರತದ ಸಂದರ್ಭದಲ್ಲಿ ಶಕ್ಯವಿಲ್ಲ. ಸಮಗ್ರ ಹೋರಾಟವೊಂದೇ ಇವೆಲ್ಲಕ್ಕೂ ತೆರೆದ ಮಾರ್ಗ ಎಂಬುದನ್ನು ಈವರೆಗಿನ ಎಲ್ಲ ಪುನರುಜ್ಜೀವನ, ಮತ ಸಂಸ್ಕರಣ, ರಾಜಕೀಯ ಚಳುವಳಿಗಳ ಕತೆ ನಮಗೆ ಬಹಿರಂಗವಾಗಿಯೇ ಪಾಠ ಹೇಳುತ್ತದೆ. ಇದಕ್ಕೆ ರಾಜಕೀಯ ರಂಗವೊಂದೇ ಅಲ್ಲ, ಎಲ್ಲ ರಂಗಗಳೂ ಪೂರಕವಾಗಿ ಹೆಜ್ಜೆ ಇಟ್ಟಾಗ, ಹೊಸಮಾರ್ಗ ನಿರ್ಮಾಣ ಮಾಡಿಕೊಂಡಾಗ ಸಾಧಿತವಾಗುತ್ತದೆ ಎನ್ನಿಸುತ್ತದೆ.

ಈ ಹಿನ್ನೆಲೆಯಲ್ಲಿ ತೆಲುಗು ಸಾಹಿತ್ಯದಲ್ಲಿ ಬಂದ ದಲಿತ ಸಂವೇದನೆ ಕುರಿತ ಸೃಜನಶೀಲ ಪ್ರತಿಕ್ರಿಯೆಯನ್ನು ಇಲ್ಲಿ ಪರಿಶೀಲಿಸಬಹುದಾಗಿದೆ.

ಮೊಟ್ಟ ಮೊದಲು ಮೇಲು ವರ್ಗಗಳವರ ಆಚಾರ ವಿಚಾರಗಳ ವಿರುದ್ಧ ಆದರಲ್ಲಿಯೂ ಜಾತಿಮತಗಳ ವಿರುದ್ಧ ಬಂಡಾಯ ಎದ್ದ ಕವಿ, ವೇಮನನೇ ಇರಬೇಕು:[2,3]

“ಮಾಲ ಮಾಲಗಾದು ಮಹಿಮಾದನೇ ಪ್ರೊದ್ದು
ಮಾಟದಿರುಗುವಾಡು ಮಾಲಗಾಕ
ವಾನಿ ಮಾಲಯನ್ನವಾಡೆಪೋ ಪೆನಮಾಲ
ವಿಶ್ವದಾಭಿರಾಮ ವಿನರವೇಮ ॥”

“ಮಾಲವಾಡಯಿನನು ಮರಿ ಆತ್ಮಮಾದನು
ಮನಸು ನಿಲಿಪೆನೇನಿ ಮಾಲಗಾಡು
ಮನಸು ನಿಲುಪಕುನ್ನ ಮಹಿಮಾದ ಮಾಲಡೌ
ವಿಶ್ವದಾಭಿರಾಮ ವಿನರವೇಮ ॥”

“ಮಾಲವಾನಿಸಂಟಿ ಮರಿ ನೀಳ್ಳ ಮುನಿಗೇರು
ಮಾಲಕರ್ಮಜೇತ ಮಾಲಡಯ್ಯೆ
ಏಲ ತೆಲಿಯಲೇದೊಯೀ ನರಪಶುವುಲು
ವಿಶ್ವದಾಭಿರಾಮ ವಿನರವೇಮ ॥”

---

2 ಲೋಕ ಕವಿ ವೇಮನಯೋಗಿ, ಲೇ : ಮರುಪೂರು ಕೋದಂಡ ರಾಮರೆಡ್ಡಿ, ಪ್ರ : 1983

3 ಸಾಂಘಿಕ ವಿಪ್ಲವ ರಚಯಿತಲು, ಲೇ : ಕತ್ತಿ ಪದ್ಮಾರಾವು, ಪ್ರ : 1983

ಮಾತಿಗೆ ತಪ್ಪುವವ ಹೊಲೆಯು, ಆತ್ಮಸಾಕ್ಷಾತ್ಕಾರಗೊಳಿಸಿಕೊಳ್ಳದವ ಹೊಲೆಯು, ಹೊಲೆಯುನನ್ನು ಮುಟ್ಟಿ ನೀರಿನಲ್ಲಿ ಮುಳುಗುವುದಾದರೆ (ಮುಳುಗಿ ಪಾಪ ಪರಿಹರಿಸಿಕೊಳ್ಳಬಹುದಾದರೆ), ಹೊಲೆಯು ಕರ್ಮದಿಂದಲೇ ಹೊಲೆಯು ಹೇಗಾಗುತ್ತಾನೆ? (ಅವ ಮುಳುಗಿದರೆ ಪಾಪ ಹೋಗುವುದಿಲ್ಲ ಏಕೆ?)—ಈ ಬಗೆಯಾಗಿ ಪ್ರಶ್ನಿಸುವ, ಲೇವಡಿಮಾಡುವ, ನಿಂದಿಸುವ, ಧಾಳೀ ಮನೋಭಾವದ ವೇಮನ, ಮೇಲು ವರ್ಗದಿಂದಲೇ ಬಂದವನಾಗಿದ್ದಾನೆ. ಮನೆಯಿಂದ ಮನೆಗೆ, ಬೀದಿಯಿಂದ ಬೀದಿಗೆ ಮೌಖಿಕವಾಗಿಯೇ ಹರಿದ ವೇಮನ, ತೆಲುಗಿನ ಮೊಟ್ಟ ಮೊದಲ ಪ್ರಜಾಕವಿ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ, ನಿಜ. ಆದರೆ ಧಾರ್ಮಿಕ ನೆಲೆಯಲ್ಲಿಯೇ ನಿಂತು, ಹೋರಾಟ–ಸುಧಾರಣೆ–ಸಂಸ್ಕರಣಗಳಿಗಿಂತ ಪರಿಶುದ್ಧತೆ ಕಡೆಗೇ ಹೆಚ್ಚು ಗಮನ ಹರಿಸುವ ವೇಮನ, ಒಂದು ಮಾರ್ಗ ಸೃಷ್ಟಿ ಮಾಡುವಷ್ಟು ಮಹತ್ವಾಕಾಂಕ್ಷೆ ಹೊತ್ತವನಲ್ಲ.

ವೇಮನನ ನಂತರದ ಪೋತುಲೂರಿ ವೀರಬ್ರಹ್ಮಂ, ಆತನ ಶಿಷ್ಯ (ಹುಟ್ಟಿನಿಂದ ಮುಸ್ಲಿಮನಾದ) ದೂದೇಕುಲ ಸಿದ್ದಯ್ಯ ಕೂಡಾ ಈ ಬಗೆಯವರೇ.

ದಲಿತರನ್ನು ಕುರಿತು ಆಧುನಿಕ ತೆಲುಗು ಸಾಹಿತ್ಯದಲ್ಲಿ ಮೊದಲುಬಂದ ಕವಿತೆ "ಮಾಲವಾಂಡ್ರ ಪಾಟ" (ಹೊಲೆಮಾದಿಗರ ಹಾಡು), 1909ರ 'ಆಂಧ್ರ ಭಾರತಿ' ಪತ್ರಿಕೆಯಲ್ಲಿ[4] ಪ್ರಕಟವಾಯಿತು. ಆದರೆ ಇದನ್ನು ಬರೆದ ಕವಿ, ತನ್ನ ಹೆಸರು ಪ್ರಕಟಪಡಿಸಿಕೊಂಡಿಲ್ಲ.

ಆಗ್ಗಿನ್ನೂ ಗಾಂಧೀಜಿ ಭಾರತದ ರಾಜಕೀಯ ಭೂಪಟದಲ್ಲಿಯಾಗಲಿ, ಆಧುನಿಕ ತೆಲುಗು ಸಾಹಿತ್ಯದ ಮೊಟ್ಟ ಮೊದಲ ಸಾಹಿತ್ಯ ಚಳುವಳಿಯಾದ ಭಾವಕವಿತ್ವವಾಗಲಿ-ಇನ್ನೂ ಕಾಣಿಸಿಕೊಂಡಿರಲಿಲ್ಲ ಎಂಬುದನ್ನು ಗ್ರಹಿಸಿದರೆ, ಈ ಕವಿತೆಯ ಹುಟ್ಟಿನ ಬಗ್ಗೆ ಆಶ್ಚರ್ಯವಾಗುವುದು ಸಹಜ.

ಆದರೆ, ಆ ಕಾಲಕ್ಕಾಗಲೇ ಕಂದುಕೂರಿ ವೀರೇಶಲಿಂಗಂ ಪಂತುಲು ಅವರು ಸಾಮಾಜಿಕ ಸಂಸ್ಕರಣ (ಅದರಲ್ಲೂ ಮುಖ್ಯವಾಗಿ ಸ್ತ್ರೀ ಜನರ ಉದ್ಧಾರಕ್ಕಾಗಿ), ಸಾಂಸ್ಕೃತಿಕ ಸಂಸ್ಕರಣ (ಶಾಲೆ, ಪತ್ರಿಕೆ, ವಿಜ್ಞಾನ, ಸಾಹಿತ್ಯದ ಅನೇಕ ಪ್ರಕ್ರಿಯೆಗಳಲ್ಲಿ ಕೃಷಿ) ತೊಡಗಿದ್ದರು. ಗಿಡುಗು ವೇಂಕಟ ರಾಮಮೂರ್ತಿ ಪಂತುಲು ಅವರು ಸವರ ಎಂಬ ಗುಡ್ಡಗಾಡು ಜನಾಂಗದ ಸಮಗ್ರ ಅಭಿವೃದ್ಧಿಯ ಜೊತೆಗೆ ತೆಲುಗು ಸಾಹಿತ್ಯದಲ್ಲಿ ವ್ಯವಹಾರ ಭಾಷೆಯ ಬಳಕೆಗಾಗಿ ಚಳುವಳಿ ಕೈಗೊಂಡಿದ್ದರು. ರಘುಪತಿ ವೇಂಕಟರತ್ನಂ ನಾಯುಡು ಅವರು ಅಸ್ಪೃಶ್ಯರ ಏಳಿಗೆಗಾಗಿ ಅನೇಕ ಚಟುವಟಿಕೆಗಳನ್ನು ಹಮ್ಮಿಕೊಂಡಿದ್ದರು. ಕೊಮರ್ರಾಜು ವೇಂಕಟ ಲಕ್ಷ್ಮಣರಾವು ಪಂತುಲು ಅವರು

---

4 ಅಸ್ಪೃಶ್ಯತಾ ನಿರಸನ ಕವಿತ್ವಂ, ಲೇ : ಮದ್ದೂರಿ ಸುಬ್ಬಾರೆಡ್ಡಿ, ಗ್ರಂ : ಸಾಹಿತ್ಯ ವಿವೇಚನ, ಪ್ರ : 1974

ನಾಡಿಗರಿಗೆ ಚರಿತ್ರೆ ಮತ್ತು ವಿಜ್ಞಾನಗಳ ತಿಳುವಳಿಕೆ, ಬೆಳವಣಿಗೆಗಾಗಿ ದುಡಿಯು ತ್ತಿದ್ದರು. ಅಷ್ಟೇಕೆ, ಏನುಗುಲ ವೀರಾಸ್ವಾಮಿ, ಸಾಮಿನೇನಿ ಮುದ್ದು ನರಸಿಂಹಾ ನಾಯುನಿಂ, ಗಾಜುಲ ಲಕ್ಷ್ಮೀನರಸುಚೆಟ್ಟಿ, ಪುದೂರು ಅನಂತರಾಮಶಾಸ್ತ್ರಿ, ಪರವಸ್ತು ವೆಂಕಟರಂಗಾಚಾರ್ಯುಲು—ಇವರೆಲ್ಲಾ ವೀರೇಶಲಿಂಗಂ ಅವರಿಗಿಂತ ಮೊದಲೇ (ಅಂದರೆ 1842-47ರ ಕಾಲಕ್ಕೇ) ಸಂಸ್ಕರಣ ಪ್ರಿಯತೆಯನ್ನು, ಮೂಢನಂಬಿಕೆಗಳ ಬಗ್ಗೆ ವಿರೋಧವನ್ನು, ವೈಜ್ಞಾನಿಕ ದೃಷ್ಟಿಯನ್ನು ಲೇಖನಗಳಲ್ಲಿ, ಪತ್ರಿಕೆಗಳಲ್ಲಿ ಕೈಗೊಂಡಿದ್ದು, ಜಾತಿಮತವನ್ನು ಹೀಗಳೆದಿದ್ದರು.[5]

ಈ ಎಲ್ಲ ನೆಲೆಗಟ್ಟಿನಮೇಲೆ, ಹೆಸರು ಪ್ರಕಟಪಡಿಸದೆಯೂ "ಹೊಲೆ ಮಾದಿ ಗರ ಹಾಡು" ಕವಿತೆ ಬರೆಯುವ ಪ್ರಯತ್ನ ಮಾಡಿದ್ದು ಹೆಚ್ಚೇನಲ್ಲ, ಆದರೆ ಕವಿತೆ ಕೆಲವು ಸ್ವಾರಸ್ಯಗಳನ್ನು ರಹಸ್ಯಗಳನ್ನು ಉಳ್ಳದ್ದಾಗಿದೆ.

"ಅಂದಾರು ಪುಟ್ಟಿರೀ ಹಿಂದಮ್ಮ ತಲ್ಲೀಕಿ
ಅಂದಾರು ಒಕ್ಕಟ್ಟೆ ಉಂದಾಲಿಸಕ್ಕಂಗ
ಕಷ್ಟಮ್ಮುಲೊಚ್ಚೀನ ನಿಷ್ಠೂರಮೊಚ್ಚೀನ
ಇಷ್ಟಮ್ಮುಗಾನುಂಡಿ ಕಟ್ಟೂಗನುಂದಾಮು
ಎಟ್ಟಾಗುಯೆಕ್ಕೂವ ಬ್ಯಾಮ್ಮರ್ಲು ಮಾಕಂಟೆ
ಎಟ್ಟಾಗುಯೆಕ್ಕೂವ ಯೇರೈನ ಮಾಕಂಟೆ
ವರ್ಣಾಲಯೆಕ್ಕುವ ಪುಟ್ಟಂಗ ಲೇದಯ್ಯ
ಮಮ್ಮೇಲ ಕಿಂದೀಕಿ ಕುಮ್ಮೇರು ಮಾವೋರು
ಏದಾಲು ಮಾನಾರು ಇಂಗ್ಲೀಷು ಚದಿವಾರು
ಎಗಬಡುತು ಉನ್ನಾರು ಎಟ್ಟೀ ವೃತ್ತುಲಕ್ಕೈನ
ಮತ ಮುಚ್ಚುಕುಂಟೇನು ಮಾವೋಡಮುಂಟಾರು
ಸೋಪೆಟ್ಟಿ ಕಡಿಗಿತೇ ಶುಭ್ರಪೌನಂಟಾರು
ಸೋಪೆಟ್ಟಿ ಕಡುಗುಕೊನಿ ಶುಭ್ರಂಗನುಂಟಾಮು
ಸಾರಾಯಿ ತಾಗಾಮು ಶುಭ್ರಂಗನುಂಟಾಮು
ಏದಾಲು ಸಕ್ಕಂಗ ಇನಿಪಿಂಚುತಾಮಯ್ಯ
ಹಿಂದೂಲಮೌ ಮಮ್ಮು ಮಂದೂಲ ಮನವದ್ದು
ಹಿಂದೂಲವೈಯಿಪ್ಪು ಮುಂದೂಕು ವಸ್ತಾಮು
ತಮ್ಮೂಲಮನಿ ಮೀರು ಮಮ್ಮೂಲ ಜೂಡಂಡಿ
ಅಮ್ಮೋರು ದೀವಿಂಚಿ ಅಯಿಶ್ವರ್ಯಮಿಚ್ಚೂನು."

5 ಸಂಪಾದಕೀಯವ್ಯಾಸಂ, ಲೇ : ಕೆ. ಕೆ. ರಂಗನಾಥಾಚಾರ್ಯುಲು, ಗ್ರಂ : "ನೂರೇಳ್ಲ ತೆಲುಗುನಾಡು", ಪುಟ Lii

ಕವಿತೆ ಏನೋ "ಹೊಲೆಮಾದಿಗರ ಹಾಡು" ಎಂದು, ಹೊಲೆಯನೊಬ್ಬ ಮಂಡಿಸಿದಂತಿದೆ. ಆದರೆ ಅವತ್ತಿನ ಬ್ರಾಹ್ಮಣರ ಸ್ಥಿತಿ : ವೇದಗಳನ್ನು ಮರೆತು ಇಂಗ್ಲಿಷ್ ಓದುವುದು, ಯಾವುದೇ ವೃತ್ತಿಗಾದರೂ ಹಾತೊರೆಯುವಿಕೆ, ಸೋಪು ಹಾಕಿ ತೊಳೆದುಕೊಂಡರೆ ಶುಭ್ರವಾಗಿಬಿಡಬಹುದು ಇತ್ಯಾದಿ ಆಕ್ಷೇಪಾರ್ಹ ಅಳಲು ಗಮನಿಸಿದರೆ, ಈ ಕವಿತೆಯನ್ನು ಯಾರೋ ಬ್ರಾಹ್ಮಣನೇ ಬರೆದಂತಿದೆ. ಅದರಲ್ಲೂ ಆಧುನಿಕತೆಯ ಕಡುವಿರೋಧಿಯಾದವನೇ ಇರಲಿಕ್ಕೂ ಸಾಕು. ಅದೇ ಕವಿತೆಯ ಕೊನೆಗೆ ತನ್ನ ಮುಸುಕಿನ ಗುದ್ದನ್ನು ಹೊಲೆಯರ ಕಡೆ ತಿರುಗಿಸಿ : ಸೋಪು ಹಾಕಿ ತೊಳೆದುಕೊಂಡು ಶುಭ್ರವಾಗಿರುತ್ತೇವೆ. ಸಾರಾಯಿ ಕುಡಿಯುವುದು ನಿಲ್ಲಿಸುತ್ತೇವೆ. ವೇದಗಳನ್ನು ಚೆನ್ನಾಗಿ ಒಪ್ಪಿಸುತ್ತೇವೆ. ನಾವೂ ಹಿಂದೂಗಳೇ, ಅಪಹಾಸ್ಯ ಮಾಡಬೇಡಿ, ತಮ್ಮಂದಿರೆಂದು ನಮ್ಮನ್ನು ಪರಿಗಣಿಸಿ. ನಾವೆಲ್ಲಾ ಹಿಂದೂ ತಾಯಿಯ ಮಕ್ಕಳಲ್ಲವೆ ? ಒಂದಾಗಿ ಚೆನ್ನಾಗಿ ಇರಬೇಕು. ಕಷ್ಟವೇ ಬರಲಿ, ನಿಷ್ಠೂರವೇ ಬರಲಿ, ಜೊತೆಯಾಗಿ. ಕಟ್ಟುಪಾಡಿನಲ್ಲಿರೋಣ. ಹೇಗೂ ಬ್ರಾಹ್ಮಣರೇ ನಮಗಿಂತ ಹೆಚ್ಚು—ಇತ್ಯಾದಿಯಾಗಿ ಒಕ್ಕಾಣಿಸಿದ್ದಾನೆ ಕವಿ. ಏನೆಲ್ಲಾ ಆಗುವಾಗ (ಅದರಿಂದಲೇ ಹೊಲೆಮಾದಿಗರ ಹಾಡು" ಎಂದು ಕರೆದಿರುವುದು. ಜಾತಿ ನೀತಿ ಬಿಟ್ಟವರನ್ನ ಹೊಲೆ ಮಾದಿಗರು ಎಂದು ಕರೆಯುವ ರೂಢಿ ಬ್ರಾಹ್ಮಣರ ಮನೆಗಳಲ್ಲಿ ಇವತ್ತಿಗೂ ಉಂಟಷ್ಟೆ ?) ಇದೂ ಆದರೆ ಹೆಚ್ಚಲ್ಲ ಎಂಬ ಕೋಪ ಇಲ್ಲಿನ ಕವಿಗೆ. ಒಟ್ಟಾರೆ : ತಿಳಿ ಹಾಸ್ಯದ ನಡುವೆ, ಹೊಲೆಯರ ಬಗ್ಗೆ ಕೆಲವು ಹಿತವಚನಗಳ ಮಾತಾಡಿ, ಬ್ರಾಹ್ಮಣರ ಆ ಮೂಲಕ ಮೇಲುವರ್ಗದ ಹಿಂದೂಗಳನ್ನು ಚುಚ್ಚುವಂತೆ, ತರಾಟೆಗೆ ತೆಗೆದುಕೊಳ್ಳುವಂತಿರುವ ಈ ಕವಿತೆ, 20ನೇ ಶತಮಾನದ ಪ್ರಾರಂಭದ ಸಾಮಾಜಿಕ ಧಾರ್ಮಿಕ ಸ್ಥಿತಿ–ಗತಿಗೆ ಒಂದು ಪುಟ್ಟ ಕಿಂಡಿಯಾಗಿದೆ ಎಂದು ನನ್ನ ಅಭಿಪ್ರಾಯ.

ಜಾತಿ ಮತಗಳ ಬಗ್ಗೆ ತನ್ನ ಕಾವ್ಯಶಿಲ್ಪದಲ್ಲಿ ಪ್ರಸ್ತಾಪಿಸಿದ್ದು ಮಾತ್ರವೇ ಅಲ್ಲ, ಅಸ್ಪೃಶ್ಯರನ್ನೇ ನೇರವಾಗಿ ತನ್ನ ಕಾವ್ಯವಸ್ತುವನ್ನಾಗಿ ಮಾಡಿಕೊಂಡ ಕೀರ್ತಿ–ಯಶಸ್ಸು ಗುರಜಾಡ ವೇಂಕಟ ಅಪ್ಪಾರಾವು ಅವರದು. ಆಧುನಿಕ ತೆಲುಗು ಸಾಹಿತ್ಯದ ಕತೆ, ನಾಟಕ, ಕಾವ್ಯ ಪ್ರಕ್ರಿಯೆಗಳ ಹರಿಕಾರರಾದ ಗುರಜಾಡ ಅವರು, ತಮ್ಮ ಕಾಲದ ಗುರು ಸಮಾನರಾದ ವೀರೇಶಲಿಂಗಂ, ರಘುಪತಿ ನಾಯುಡು ಅವರ ಸಮಾಜ ಸಂಸ್ಕರಣ ಹೋರಾಟಗಳನ್ನೂ, ಪರಮ ಸ್ನೇಹಿತ ಗಿಡುಗು ರಾಮಮೂರ್ತಿಯವರ ವ್ಯವಹಾರಿಕ ಭಾಷಾ ಚಳುವಳಿಯನ್ನೂ—ಸಂಪೂರ್ಣ ಮೈಗೂಡಿಸಿಕೊಂಡು ಸೃಜನಶೀಲತೆಯಲ್ಲಿ ತೊಡಗಿ, ಯಾವ ಭಾವಾವೇಶಕ್ಕೂ ಎಡೆಗೊಡದೆ, ಒಳ್ಳೆಯತನ ಒಂದೇ ಸಾರ್ವಕಾಲಿಕ ಮೌಲ್ಯ ಎಂಬುದನ್ನು ಎತ್ತಿಹಿಡಿದಿದ್ದಾರೆ : [6]

---

6 ಗುರಜಾಡ ರಚನಲು-ಕವಿತಲ ಸಂಪುಟಂ, ಸಂ : ಸೆಟ್ಟಿ ಈಶ್ವರರಾವು, ಪ್ರ : 1984

"ಯೆಲ್ಲ ಲೋಕಮುವೊಕ್ಕೆಯಿಲ್ಲೈ
ವರ್ಣ ಭೇದಮುಲೆಲ್ಲ ಕಲ್ಲೈ
ವೇಲ ನೆರುಗನಿ ಪ್ರೇಮ ಬಂಧಮು
ವೇಡುಕಲು ಕುರಿಯ."

"ಮತಮುಲನ್ನಿಯು ಮಾಸಿಪೋವುನು
ಜ್ಞಾನಮೊಕ್ಕಟಿ ನಿಲಿಚಿವೆಲುಗುನು
ಅಂತ ಸ್ವರ್ಗ ಸುಖಂಬುಲನ್ನವಿ
ಯವನಿ ವಿಲಸಿಲ್ಲುನ್."

ಪ್ರಪಂಚವೆಲ್ಲಾ ಒಂದೇ ಮನೆಯಾಗಲಿ, ವರ್ಣಭೇದವೆಲ್ಲಾ ಕನಸಾಗಲಿ, ಕೊನೆಯಿಲ್ಲದ ಪ್ರೇಮಬಂಧವು ಕೋರಿದ್ದನ್ನು ನೀಡಲಿ-ಎಂದು ಹಂಬಲಿಸುವ ಕವಿಗುರಜಾಡ ; ಆವಾಗ–ಮತಗಳೆಲ್ಲಾ ಅಳಿದು ಹೋಗಿ, ಜ್ಞಾನ ಒಂದೇ ಶಾಶ್ವತವಾಗಿ ಬೆಳಗುತ್ತದೆ, ಸ್ವರ್ಗ ಸುಖಗಳೆನ್ನುವ ಎಲ್ಲವೂ ಇಳೆಯಲ್ಲಿಯೆ ಮೆರೆಯುತ್ತದೆ ಎಂದು 1910ರಲ್ಲೇ "ಮುತ್ಯಾಲ ಸರಮುಲು" ಎಂಬ ಕವಿತೆಯಲ್ಲಿ ಕನಸಿದ್ದಾರೆ.

ಜಾತಿ ಮತ ಭೇದ ಕೇವಲ ತಿಂದು ಉಂಡು ಅಡ್ಡಾಡಿದರೆ ಹೋಗಿಬಿಡುವುದಲ್ಲ ಎಂದು ಸುಧಾರಕರ ಗಮನಕ್ಕೆ ಕವಿ :

"ಕಲಿಸಿ ಮೆಸಗಿನಯಂತ ಮಾತ್ರನೆ
ಕಲುಗಬೋದೀಯೈಕಮತ್ಯಮು
ಮಾಲ ಮಾದಿಗ ಕನ್ನೆನೆವತೆನೊ
ಮರುಲು ಕೊನರಾದೋ ?"

ಹೊಲೆಯರ ಮಾದಿಗರ ಹುಡುಗಿಯೊಂದನ್ನು ಕಟ್ಟಿಕೊಂಡು ಸಹ ಬಾಳ್ವೆ ಮಾಡಬೇಕು ಎನ್ನುವಂತೆ ಆಹ್ವಾನ ನೀಡುತ್ತಾರೆ. ಕಾರ್ಯಾಚರಣೆ ಜೀವನದಲ್ಲಿ ಮುಖ್ಯ ಎಂದು ಕಾವ್ಯಬಂಧದಲ್ಲಿಯೇ ಎಚ್ಚರಿಕೆ ನೀಡಿದ್ದಾರೆ.

ಇನ್ನೂ ಒಂದು ಹೆಜ್ಜೆ ಮುಂದೆ ಇಟ್ಟು :

"ಮಲಿನ ದೇಹುಲ ಮಾಲಲನುಚುನು
ಮಲಿನ ಚಿತ್ತುಲರಧಿಕ ಕುಲಮುಲ
ನೆಲಮೊಸಂಗಿನ ವರ್ಣಧರ್ಮಮಧರ್ಮಧರ್ಮಂಬೇ"

ದೇಹ ಮಾತ್ರ ಮಲಿನಗೊಂಡವರನ್ನು ಹೊಲೆಯರೆನ್ನುತ್ತಾ ಮನಸ್ಸು ಮಲಿನಗೊಂಡವರನ್ನು ಮೇಲು ವರ್ಣಧವ.ುದವರೆಂದು ಮೆರೆಸುತ್ತಿರುವ ವರ್ಣಧರ್ಮ,

ಛೀ, ಅಧರ್ಮಾಧರ್ಮಾ ಎಂದು 1911ರಲ್ಲಿಯೇ ("ಲವಣ ರಾಜುಕಲ' ಎಂಬ ಕವಿತೆಯಲ್ಲಿ), ಹಿಂದೂ ಧರ್ಮದ ವಿರುದ್ಧ ಖಡ್ಗವೆತ್ತಿದ ಕವಿ ಗುರಜಾಡ.

ಅದರಿಂದಲೇ ಅವರು ಈ ನಿಲುವಿಗೆ ಬಂದು ಸೇರಿರಬೇಕು :

"ಮಂಚಿಚೆಡ್ಡಲು ಮನುಜಲಂದುನ
ಯೆಂಚಿಚೂಡಗ, ರೆಂಡೆಕುಲಮುಲು
ಮಂಚಿಯನ್ನದಿ, ಮಾಲಯ್ಯೆತೇ, ಮಾಲನೇ ಅಗುದುನ್"

ತೂಗಿನೋಡಿದಲ್ಲಿ ಒಳ್ಳೆಯದು-ಕೆಟ್ಟದ್ದು, ಒಳ್ಳೆಯವರು-ಕೆಟ್ಟವರು ಎಂದು ಮನುಷ್ಯರಲ್ಲಿ ಎರಡೇ ಎರಡು ಕುಲ. ಒಳ್ಳೆಯದು ಹೊಲೇ ಎನ್ನುವುದಾದರೆ ನಾನೂ ಹೊಲೆಯನೇ ಆಗುತ್ತೇನೆ—ಎಂಬ ದೀಕ್ಷೆ ತೊಟ್ಟ ಕವಿಯನ್ನು, ಸತ್ತ ಇಪ್ಪತ್ತೈದು ವರ್ಷಗಳವರೆಗೆ ಗೌರವಿಸುವುದು ಇರಲಿ, ಗುರುತಿಸಲಿಲ್ಲ ಕೂಡಾ ಎನ್ನುವುದಕ್ಕೆ (ಗುರಜಾಡ ಅವರ ಬದುಕಿನ ಕೆಲವು ಪರಿಮಿತಿಗಳನ್ನೂ ನಾವು ಮರೆಯುವಂತಿಲ್ಲ) ಬೇರೆ ಕಾರಣ ಹುಡುಕಬೇಕಾಗಿಲ್ಲವಷ್ಟೆ. ವರ್ಣಾಶ್ರಮಧರ್ಮಗಳ ಪ್ರತಿಷ್ಠಾಪಕ ಕವಿ ವಿಶ್ವನಾಥ ಸತ್ಯನಾರಾಯಣ ಅವರು, ವೀರೇಶಲಿಂಗಂ-ಗುರಜಾಡ ಸುಧಾರಕರೂ ಅಲ್ಲ, ಕವಿಗಳೂ ಅಲ್ಲ ಎಂಬುದಕ್ಕೆ ಇದಕ್ಕಿಂತ ಬೇರೆ ಅರ್ಥ ಹಚ್ಚಬೇಕಾಗಿಲ್ಲ.[7] 1940ರ ನಂತರ ತಲೆಎತ್ತಿದ ಅಭ್ಯುದಯ ಕವಿಗಳು ಅದರಲ್ಲೂ ಶ್ರೀ ಶ್ರೀ ಯವರು ಗುರಜಾಡ ಅವರನ್ನು ಮಹಾಕವಿ, ಮಹಾಮಾನವತಾವಾದಿ ಎಂದು ಸ್ವೀಕರಿಸಿದ್ದೂ, ಈಗ ನಾಡಲ್ಲೆಲ್ಲಾ ಅದೇ ಗುರಜಾಡರನ್ನು ತನ್ನ ಕಾಲಕ್ಕಿಂತ ನೂರುವರ್ಷ ಮುಂಚೆ ಹುಟ್ಟಿದ ದಾರ್ಶನಿಕಕವಿ ಎಂದು ಕೊಂಡಾಡುತ್ತಿರುವುದು—ಈ ಪ್ರಬಂಧಕ್ಕೆ ಹೊರತಾದ ಮಾತು.

ಮೇಲು ಕೀಳು ಎಂಬ ಭಾವ ಇದ್ದುಕೊಂಡು ಎಲ್ಲರೂ ಕೂಡಿ ದೇಶಕ್ಕಾಗಿ ಹೋರಾಡುವುದು ಆಗದ ಮಾತು. ಒಂದು ಪಕ್ಷ ಸ್ವರಾಜ್ಯ ಬಂದರೂ ಸುರಾಜ್ಯ ಅನ್ನಿಸಿಕೊಳ್ಳುವುದಿಲ್ಲ. ಶರೀರದಲ್ಲಿನ ಅವಯುವಗಳೆಲ್ಲಾ ಸಮಷ್ಟಿಯಾಗಿ ಕೆಲಸ ಮಾಡಿದಾಗಲೇ ಆರೋಗ್ಯ-ಎಂಬ ನೀತಿಯನ್ನು ಸಾರುವ ಮಂಗಿಪೂಡಿ ವೆಂಕಟಶರ್ಮ ಅವರ "ನಿರುದ್ಧ ಭಾರತಮು" 1915 ರಲ್ಲಿಯೇ ಬಂದಂತಹ ಕಾವ್ಯ. ಮೇಲು ವರ್ಗದವರಾದರೂ ಕೆಳವರ್ಗದವರ ಬಗ್ಗೆ ತೋರಿದ ಅನುಕಂಪ, ದೇಶದ ಏಳಿಗೆ ಬಗ್ಗೆ ನೀಡಿದ ಮುನ್ನೆಚ್ಚರಿಕೆ ಇವು ಈ ಕಾವ್ಯದ ವೈಶಿಷ್ಟ್ಯ.

ಇದೇ ಸಂದರ್ಭದಲ್ಲಿಯೇ ವೀರೇಶಲಿಂಗಂ, ರಘುಪತಿನಾಯುಡು ಅವರ ಶಿಷ್ಯರು, ತೆಲುಗು ಸಾಹಿತ್ಯದ ಪ್ರತಿಭಾವಂತ ಸಾಹಿತಿಗಳು, ಮೇಲು ವರ್ಗದಿಂದ

---

7 ಶ್ರೀ ಗುರಜಾಡ ಅಪ್ಪಾರಾವುಗಾರು, ಲೇ : ವಿಶ್ವನಾಥ ಸತ್ಯನಾರಾಯಣ, ಗ್ರಂ : "ಗುರಜಾಡ ಸಂಸ್ಕರಣ ಸಂಚಿಕ", ಸಂ : ಎಂ. ಚಲಪತಿರಾವು, ಪುಟ 44, ಪ್ರ : 1976

ಬಂದವರೂ ಆದ ಚಿಲಕಮರ್ತಿ ಲಕ್ಷ್ಮೀನರಸಿಂಹಂ, ಗುಡಿಪಾಟಿ ವೆಂಕಟಾಚಲಂ, ದೇವುಲಪಲ್ಲಿ ವೆಂಕಟ ಕೃಷ್ಣಶಾಸ್ತ್ರಿಯವರನ್ನು ನೆನೆಯಬೇಕು. ಚಿಲಕಮರ್ತಿಯವರು ಅಸ್ಪೃಶ್ಯರಿಗೆ ಪಾಠ ಪ್ರವಚನ ನಡೆಸಿದವರು. ಕೃಷ್ಣಶಾಸ್ತ್ರಿಯವರಾದರೋ ಅಸ್ಪೃಶ್ಯ ರೊಂದಿಗೆ ಪಂಕ್ತಿ ಊಟ ಮಾಡಿದ್ದಕ್ಕಾಗಿ ಜಾತಿಯಿಂದ ಬಹಿಷ್ಕರಿಸಲ್ಪಟ್ಟವರು. ಈ ಇಬ್ಬರಿಗಿಂತಲೂ ತುಂಬಾ ಭಿನ್ನರಾದವರು ಚಲಂ. ಸ್ತ್ರೀ ಸ್ವಾತಂತ್ರ್ಯ, ಸ್ವೇಚ್ಛಾ ಪ್ರಣಯಕ್ಕಾಗಿ ಹಗಲಿರುಳೂ ತಪಿಸಿದ ಚಲಂ ಅವರು, ತಾವು ಉದ್ಯೋಗದಲ್ಲಿದ್ದಾಗ ವರ್ಗವಾಗಿ ಹೋದ ಎಡೆಯಲೆಲ್ಲಾ ಹೊಲಗೇರಿಗಳಲ್ಲೇ ವಾಸಮಾಡುತ್ತಿದ್ದರೆಂದು ಕೇಳಿದ್ದೇನೆ. ಹಾಗೂ ತಮ್ಮ ಮನೆಯಲ್ಲಿ ಇಡೀ ಕುಟುಂಬವೇ ಮಾಂಸಾಹಾರವನ್ನು ಕಡ್ಡಾಯವಾಗಿ ಬಳಸುವಂತೆ ಹಟತೊಟ್ಟಿದ್ದರೆಂದೂ ಕೇಳಿದ್ದೇನೆ. ಸಹಮಾನವರು ತಿನ್ನುವ ಈ ಊಟತಿಂಡಿಗಳನ್ನು ತುಚ್ಛೀಕರಿಸುವುದು, ವಿಸರ್ಜಿಸುವುದು ಸಾಧುವಲ್ಲ ಎಂದು ಚಲಂ ಹೇಳುತ್ತಿದ್ದರಂತೆ.

ಈ ಸುಮಾರಿಗೇ ಮದರಾಸಿನಲ್ಲಿ ಹುಟ್ಟಿಕೊಂಡ ಜಸ್ಟೀಸ್‌ಪಾರ್ಟಿ ಆಂಧ್ರ ದೇಶಕ್ಕೂ ಪ್ರವೇಶಿಸಿತು. ಬ್ರಾಹ್ಮಣೇತರರ ಸಂಘಟನೆಯಿಂದ ಬ್ರಾಹ್ಮಣರ ಪ್ರಾಬಲ್ಯ ವನ್ನು ತಗ್ಗಿಸಲು ಹೊರಟ ಈ ಜಸ್ಟೀಸ್ ಪಾರ್ಟಿಯಲ್ಲಿ, ಕೆಳವರ್ಗದವರು ಯಾವುದೇ ಅವಕಾಶ ನೀಡದೆ, ತನ್ನಷ್ಟಕ್ಕೆತಾನು ಅಕಾಲಮೃತ್ಯುವಿಗೆ ಒಳಗಾಗಬೇಕಾಯಿತು.[8] ಆದರೂ ಬ್ರಾಹ್ಮಣೇತರರ ಚಳುವಳಿ, ಸಾಹಿತ್ಯದಲ್ಲಿ ಅಲ್ಪಸ್ವಲ್ಪ ಪ್ರಭಾವ ಬೀರಿದ್ದನ್ನು ತಳ್ಳಿಹಾಕಲಾಗುವುದಿಲ್ಲ (ಉದಾಹರಣೆಗೆ ತ್ರಿಪುರನೇನಿರಾಮಸ್ವಾಮಿ ಚೌದರಿಯುವರ ಕೃತಿಗಳು). ಇದೇ ರೀತಿ, ಗೋಪರಾಜು ರಾಮಚಂದ್ರರಾವು ಅವರ ನಾಸ್ತಿಕ ಚಳವಳಿ ಕೂಡಾ. ಇನ್ನೊಂದು ಬದಿಗೆ, ಗಾಂಧೀಜಿ, ದೇಶದ ರಾಜಕೀಯ ಪ್ರವೇಶದಿಂದ ಮಧ್ಯಮವರ್ಗದ ವಿದ್ಯಾವಂತರೆಲ್ಲರನ್ನೂ ಆಕರ್ಷಿಸಿದರು. ಬ್ರಹ್ಮ ಚರ್ಯದಿಂದ ರಾಮರಾಜ್ಯದವರೆಗೆ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದ ಅವರು, ಅದರಲ್ಲಿ ಅಸ್ಪೃಶ್ಯರ ಸೇವೆ–ಸುಧಾರಣೆಯೂ ಒಂದಾಗಿಸಿಕೊಂಡಿದ್ದರು. ಅದುವರೆಗೆ ದೇಶದ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗು ತ್ತಿದ್ದ ಅಸ್ಪೃಶ್ಯರನ್ನೆಲ್ಲಾ ಗಾಂಧೀಜಿ ಹರಿಜನ ಎಂದು ನಾಮಕರಣ ಮಾಡಿದರು. ಈ ಎಲ್ಲ ರಾಜಕೀಯ ಸಾಮಾಜಿಕ ಬೆಳವಣಿಗೆಗಳು ತೆಲುಗು ಸಾಹಿತ್ಯದ ಮೇಲೆ ಪರಿಣಾಮ ಬೀರದೆ ಹೋಗಲಿಲ್ಲ.

ಗಾಂಧೀಜಿಯವರ ಹರಿಜನ ಸುಧಾರಣಾ ಸಿದ್ಧಾಂತ, ಮೊದಲು ದೊಡ್ಡ ಪ್ರಮಾಣದಲ್ಲಿ ಕಾಣಿಸಿಕೊಂಡದ್ದು 1922ರಲ್ಲಿ, ಉನ್ನವ ಲಕ್ಷ್ಮೀನಾರಾಯಣ ಅವರ "ಮಾಲಪಲ್ಲಿ" (ಹೊಲಗೇರಿ) ಎಂಬ ಬೃಹತ್ ಕಾದಂಬರಿಯಲ್ಲಿ. ಆ ಕಾಲಕ್ಕಾಗಲೇ ಐರ್ಲಾಂಡ್ ಡಬ್ಲಿನ್‌ಗಳಲ್ಲಿ ಬ್ಯಾರಿಷ್ಟರ್ ಶಿಕ್ಷಣ ಪಡೆದು ಬಂದಿದ್ದ ಉನ್ನವರು,

---

8. ಹಿನ್ನುಡಿ, ಲೇ : ವಿ. ಲಕ್ಷ್ಮೀನಾರಾಯಣ, ಗ್ರಂ : ದೇವಯ್ಯ ಹರವೆಯವರ "ಕತ್ತಲಾಳದ ಕಿರಣಗಳು", ಪುಟ 90, ಪ್ರ : 1982

ವೃತ್ತಿಯಲ್ಲಿ ನ್ಯಾಯವಾದಿಯಾಗಿ, ಕಾಂಗ್ರೆಸ್ ಪಕ್ಷದೊಂದಿಗೆ ಸಕ್ರಿಯ ಸಂಬಂಧ ಇಟ್ಟುಕೊಂಡಿದ್ದರು. ಜಾತಿಯಿಂದ ಮೇಲುವರ್ಗದಿಂದ ಬಂದಿದ್ದರೂ, ಗಾಂಧೀಜಿಯ ಸತ್ಯಾಗ್ರಹ-ಸರ್ವೋದಯಗಳಿಗೆ ಮನಸೋತು ಹೋಗಿದ್ದರು.

ಇದರಿಂದ "ಹೊಲಗೇರಿ" ಎಂಬ ತಮ್ಮ ಕಾದಂಬರಿಯಲ್ಲಿ ನಾಯಕನಾದ ರಾಮದಾಸು-ಹರಿಜನ. ಒಂದು ಎಳೆ, ಹಿಂದೂಧರ್ಮದ ಎಲ್ಲ ಸೌಭಾಗ್ಯವನ್ನೂ ಒಳಗೊಂಡು; ಇನ್ನೊಂದು ಎಳೆ, ಸಮಕಾಲೀನ ರಾಜಕೀಯ ಮುಖಗಳನ್ನೂ ಒಳಗೊಂಡು-ವೈತಳೆದುನಿಂತ ಕಾದಂಬರಿ ಇದು. ಹೀಗಾಗಿ ರಾಜಕೀಯ ಸಿದ್ಧಾಂತ,ಚರ್ಚೆ, ಜೈಲು, ಚಳುವಳಿ-ನಮ್ಮ ಮುಂದೆ ಮೆರವಣಿಗೆ ನಡೆಸುವಂತೆಯೇ; ದೇವರು, ಕರ್ಮ ಸಿದ್ಧಾಂತ, ಪ್ರಣಯ, ಭಕ್ತಿಗಳು ಕೂಡಾ ಪ್ರತ್ಯಕ್ಷವಾಗುತ್ತವೆ. ಸಂಪ್ರದಾಯ, ವಾಸ್ತವ,ಕನಸಿನ-ನಡುವೆ; ಶ್ರೀರಾಮ-ಶ್ರೀಕೃಷ್ಣ, ಗಾಂಧಿ, ಉನ್ನವ ಲಕ್ಷ್ಮೀನಾರಾಯಣ ಅವರ ನಡುವೆ ಬೆಸುಗೆ ಹಾಕಿಕೊಳ್ಳುವ "ಹೊಲಗೇರಿ" ಕಾದಂಬರಿ, ಹರಿಜನರಲ್ಲಿಯೂ ದೈವಭಕ್ತಿ, ತ್ಯಾಗ, ಮಾನವೀಯ ಮೌಲ್ಯಗಳನ್ನು ಕಂಡಿರಿಸುತ್ತದೆ. ಆದರ್ಶ ಸಮಾಜ ಒಂದರ ವೈಭವೀಕರಣವಾಗಿ ನಿಲ್ಲುವ "ಹೊಲಗೇರಿ" ಕಾದಂಬರಿ, ಸ್ವಾತಂತ್ರ್ಯ ಹೋರಾಟದ ಪ್ರಾರಂಭ ದೆಸೆಯಲ್ಲಿಯೇ ಬಂದದ್ದು ಎಂಬುದನ್ನು ಇಲ್ಲಿ ಮರೆಯುವಂತಿಲ್ಲ. ತನ್ನ ಪರಿಮಿತಿಯಲ್ಲಿಯೇ ಸಮಾಜಚಿತ್ರಣವನ್ನು ಕೈಗೊಳ್ಳುವ "ಹೊಲಗೇರಿ" ಕಾದಂಬರಿ, ಆನಂತರ ಬಂದ ವಿಶ್ವನಾಥ ಸತ್ಯನಾರಾಯಣರ ಹಿಂದೂಧರ್ಮದ ಸನಾತನ ಮೌಲ್ಯಗಳ ಬೃಹತ್ ಕೋಶವೆನ್ನಿಸಿದ "ವೇಯಿಪಡಗಲು" (ಸಾವಿರ ಹೆಡೆಗಳು) ಕಾದಂಬರಿಗೆ ಪ್ರತಿಸ್ಪರ್ಧಿಯಾಗಿ ನಿಂತು, ಜನತೆಯ ಮೇಲೆ ಗಾಢ ಪ್ರಭಾವ ಬೀರಿತ್ತು ಎಂಬುವನ್ನು ಉಪೇಕ್ಷಿಸುವಂತಿಲ್ಲ. ಅದಕ್ಕೂ ಮುಖ್ಯವಾಗಿ, ದೇಶಭಕ್ತಿ, ರಾಷ್ಟ್ರೀಯ ಚಳುವಳಿಗಳನ್ನು ಚಿತ್ರಿಸಿದ ಪರಿಣಾಮವಾಗಿ ಮತ್ತೆ ಮತ್ತೆ ಆಗಿನ ಆಳುವ ಸರ್ಕಾರವಾದ ಸಾಮ್ರಾಜ್ಯಶಾಹಿ ಬ್ರಿಟಿಷರಿಂದ ನಿಷೇಧಿಸಲ್ಪಡುತ್ತಿತ್ತು ಎಂಬುದು "ಹೊಲಗೇರಿ" ಕಾದಂಬರಿಯ ಮಹತ್ವದ ಸಂಗತಿ.

ಇದೇ ವೇಳೆಗೆ ಬಿಡಿಬಿಡಿಯಾಗಿ ಪತ್ರಿಕೆಗಳಲ್ಲಿ, ಸಂಕಲನಗಳಲ್ಲಿ ಬಂದ ಕಾವ್ಯಗಳಲ್ಲಿ ಕೆಲವನ್ನಾದರೂ ಇಲ್ಲಿ ಉಲ್ಲೇಖಿಸುವುದು ಸಮಂಜಸ. ಅವುಗಳಲ್ಲಿ ನೇರವಾಗಿ ಹರಿಜನರನ್ನು ಕುರಿತು ಬರೆದವೂ ಇವೆ, ಹರಿಜನರ ಬಗ್ಗೆ ಮೇಲು ವರ್ಗದವರ ಕಣ್ಣು ತೆರೆಸಲು ನಡೆಸಿದ ಪ್ರಯತ್ನವೂ ಕಂಡುಬರುತ್ತದೆ[9]. ಬ್ರಹ್ಮಭಟ್ಲ ಪಟ್ಟಾಭಿರಾಮ ಶರ್ಮರ" "ಮಾಲಲು" (1920), ಗೊಲ್ಲಪಲ್ಲಿ ಶಾಮ್ಯುಯೆಲ್‌ಅವರ 'ಪಂಚಮೋದ್ಧರಣಮು' (1921), ಚೆರ್ಲ ನಾರಾಯಣ ಶಾಸ್ತ್ರಿಯವರ 'ಹೆಚ್ಚರಿಕ' (1921), ಮಂಗಿಪೂಡಿ ವೆಂಕಟಶರ್ಮರ 'ಸನಾತನಾಂಧ್ರುಲು' (1925), ಪುರಿಪಂಡಾ ಅಪ್ಪಲ ಸ್ವಾಮಿಯವರ 'ಪಂಚಮ ವಿಲಾಸಮು' (1925), ದೋಮಾ ವೆಂಕಟಸ್ವಾಮಿ

9. ಅಸ್ಪೃಶ್ಯತಾ ನಿರಸನ ಕವಿತ್ವಂ, ಲೇ : ಮದ್ದೂರಿ ಸುಬ್ಬಾರೆಡ್ಡಿ, ಗ್ರಂ : ಸಾಹಿತ್ಯ ವಿವೇಚನ, ಪ್ರ : 1974

ಗುಪ್ತಾ ಅವರ 'ಮಾಲಪಿಲ್ಲ' (1925), ಗರಿಮೆಳ್ಳ ಸತ್ಯನಾರಾಯಣ ಅವರ 'ಖಂಡ ಕಾವ್ಯಮು' ಸಂಕಲನದಲ್ಲಿನ ಅಸ್ಪೃಶ್ಯತೆಯನ್ನು ಹೀಗಳೆಯುವ ಭಾಗ (1926), ಸೋಮಂಚಿ ಸೂರ್ಯನಾರಾಯಣ ಶರ್ಮರ 'ಮಾಲವಾಡು' (1932), ಚಿಳ್ಳ ಗುರ್ನಾಥಂ ಅವರ 'ಅಸ್ಪೃಶ್ಯವಿಲಾಸಮು' (1933), ಕರ್ಲಪಾಲೆಂ ಕೃಷ್ಣಾರಾವು ಅವರ 'ಮಲ್ಲೆಪೂಲು' ಸಂಕಲನದ 'ಹರಿಜನುಡು' (1935), ಮದ್ದೂರಿ ಅನ್ನ ಪೂರ್ಣಯ್ಯನವರ 'ಮಾಲ' (1936), ಕಾಟೂರಿ ವೆಂಕಟೇಶ್ವರರಾವು ಅವರ 'ಗುಡಿ ಗಂಟಲು', ಕೊಂಡಪಲ್ಲಿ ಜಗನ್ನಾಥದಾಸಂ ಅವರ 'ಕಲ್ಲು ಮಾನುಡೋಯ್' ನೆಲ್ಲೂರಿ ವೆಂಕಟ್ರಾಮಾ ನಾಯುಡು ಅವರ 'ಹರಿಜನುಲು'. ಇವುಗಳಲ್ಲಿ ಕೆಲವು ಕವಿತೆಗಳಾದರೆ, ಮತ್ತೆ ಕೆಲವು–ಖಂಡ ಕಾವ್ಯಗಳು, ಕಥನಕಾವ್ಯಗಳು, ಪ್ರಚಾರ ಗೀತೆ ಗಳು ಕೂಡಾ ಆಗಿವೆ. ಅಲ್ಲದೆ ಬುರ್ರಕಥಲು, ಬೊಬ್ಬಿಲಿಪಾಟ ವರುಸಲು, ಜಮು ಕುಲ ಕಥಲು, ಏಲಪದಗಳು ಮೊದಲಾದ ತೆಲುಗಿನ ಜಾನಪದ ಪ್ರಕ್ರಿಯೆಗಳು ಕೂಡಾ ಹರಿಜನ ವಸ್ತು ವಿಷಯವನ್ನು ಒಳಗೊಂಡಿವೆ. (ಹಾಗೆನೋಡಿದರೆ, ತೆಲುಗಿನ ಜಾನಪದ ಸಾಹಿತ್ಯದಲ್ಲಿ ಬಂದ ದಲಿತ ಸಂವೇದನೆ ಕುರಿತೇ ಪ್ರತ್ಯೇಕ ಅಧ್ಯಯನ ಮಾಡಲು ಅವಕಾಶವಿದೆ. ಕಾಲಮಿತಿ ಹಾಗೂ ಈ ಪ್ರಬಂಧಕ್ಕೆ ನಾನು ಹಾಕಿಕೊಂಡ ಮಿತಿಯಿಂದಾಗಿ ಇಲ್ಲಿ ಅದು ಸಾಧ್ಯವಾಗಿಲ್ಲ.)

ಇಲ್ಲಿ ವಿಶೇಷವಾಗಿ ಹೇಳಬಹುದಾದದ್ದು ಜಿ. ಜೋಸೆಫ್ ಅವರ 'ಕನ್ನೀಟಿ ಕಬುರು', ಕೆ. ಸಿ. ಜಾನ್ ಅವರ 'ಬಹಿಷ್ಕಾರಮು', ಕುಸುಮ ಧರ್ಮನ್ನ ಅವರ 'ಹರಿಜನಶತಕಂ' ಎಂಬ ಕಾವ್ಯಗಳು. ಇವು ನೇರವಾಗಿ ಹರಿಜನ ಜನಾಂಗದವ ರಿಂದಲೇ ಒಡಮೂಡಿದವಾಗಿವೆ.

ದಿಬ್ಬ ಅನ್ನುವವನೊಬ್ಬ. ಅವನಿಗೆ ಒಬ್ಬ ಮಗ. ಆ ಮಗನಿಗೊ ಓದು ಬರಹ ಕಲಿಯಬೇಕು ಎಂಬ ಹಂಬಲ. ಒಬ್ಬ ಅಯ್ನೋರಲ್ಲಿಗೆ ಹೋದ. ಅಡ್ಡ ಬಿದ್ದ. ಬೇಕಾದಷ್ಟು ಕಾಣಿಕೆ ತಂದು ಒಪ್ಪಿಸ್ತೀನಿ ಅಂದ. ಹೊಸಾ ಚರ್ಮದಲ್ಲಿ ಮಾಡಿದ ಜೋಡು ತೊಡಿಸ್ತೀನಿ ಅಂದ. ಪಾಠ ಹೇಳಿಕೊಡಿ ಬುದ್ಧಿ ಅಂತ ಕಾಡಿದ. ಬೇಡಿದ. ಅಯ್ನೋರು ಒಪ್ಪಲಿಲ್ಲ. ಆದರೇನು, ದಿಬ್ಬನ ಮಗ ದೊಡ್ಡವನಾದ. ಜೀವನಾನೂ ಸಾಗಿಸಿದ. ಸಾಯುವ ಕಾಲವೂ ಬಂತು. ಸಾಯೋಕೆ ಮುಂಚೆ, ಸ್ವಾತಂತ್ರ್ಯ ಭಾಗ್ಯ ಒಲಿದು ಬರೋವರೆಗೆ ನಮ್ಮ ಜಾತಿ ಹಣೇ ಬರಹ ತೀರದವ್ವಾ ಎಂದು "ಕಣ್ಣೀರ ಸಂದೇಶ" ಹರಿಸಿ ಪ್ರಾಣಬಿಟ್ಟ. ಇದು ಜಿ. ಜೋಸೆಫ್ ಅವರ ಕಾವ್ಯದ ಕಥಾವಸ್ತು.

ತೆಲುಗಿನ ಪ್ರಥಮ ಸಾಹಿತ್ಯ ಚಳುವಳಿಯಾದ ಭಾವಕವಿತ್ವದವರ ತಲೆಮಾರಿ ನಲ್ಲಿಯೇ ಮೂಡಿ ಬಂದ, ದಲಿತ ಜನಾಂಗದ ದೊಡ್ಡದನಿ ಗುರ್ರಂಜಾಷುವಾ. ಅವರ ಕಾವ್ಯ ಶೈಲಿ ಅಪ್ಪಟ ಪ್ರಾಚೀನ ಮಾರ್ಗ: ವೃತ್ತ, ಛಂದಸ್ಸು, ಅಲಂಕಾರಗಳಿಂದ

ಹೆಣೆವದ್ದು. ಆದರೆ ವಸ್ತು ರೀತಿ ಮಾತ್ರ ತನ್ನ, ತನ್ನ ಜನಾಂಗದ–ನೋವು, ಅವಮಾನ, ಹಿಂಸೆ, ಗೋಳು, ವಿಷಾದ, ಕಣ್ಣೀರಕೋಡಿ.

ಕವಿಯ ದೃಷ್ಟಿಯಿಂದಲೂ ಜನತೆಯ ದೃಷ್ಟಿಯಿಂದಲೂ ಅಪಾರ ಮನ್ನಣೆ ಗಳಿಸಿದ 'ಗಬ್ಬಿಲಮು' (ಬಾವಲಿ) ಕಾವ್ಯದಲ್ಲಿ ಜಾಷುವಾ ಅವರೇ ಹೀಗೆ ವಿವರಿಸುತ್ತಾರೆ: ಕಾಳಿದಾಸನ ಮೇಘಸಂದೇಶದ ನಾಯಕ ತನ್ನ ಪ್ರಣಯ ಸಂದೇಶವನ್ನು ಮೇಘದ ಮೂಲಕ ಕಳಿಸುತ್ತಾನಷ್ಟೆ. ಆದರೆ ಈ ಬಾವಲಿಯ ನಾಯಕ ಅರುಂಧತೀ ಪುತ್ರನಾದ್ದರಿಂದ (ಅಸ್ಪೃಶ್ಯರಿಗೆ ಹಿಂದೂ ಸಂಸ್ಕೃತೀಕರಣದ ಹೆಸರು), ಸವರ್ಣೀಯರಿಗೆ ಸಿಗುವಂತೆ ಹಂಸ, ಗಿಣಿಗಳು ಸಿಗುವುದು ಸಾಧ್ಯವೆ? ಕೊನೆಗೆ ಅವನಿಗೆ ಸಿಕ್ಕುವುದಾದರೂ ಏನು? ಪಾಳುಬಿದ್ದ ಮನೆಗಳಲ್ಲಿ ನಿರಂತರವೂ ತಲೆಕೆಳಗಾಗಿ ಜೋತಾಡುವ ಬಾವಲಿ. (ಅದೇ ಸೂಕ್ತವಾದದ್ದೂ ಕೂಡಾ. ಜೋತಾಡುತ್ತ, ಜೋತಾಡುತ್ತ, ಪೂಜಾರಿಯಿಲ್ಲದ ವೇಳೆ, ದೇವರ ಕಿವಿಯಲ್ಲಿ ಈ ದರಿದ್ರನ ಕತೆ ಮುಟ್ಟಿಸಲಿಕ್ಕೆ.) ಬಾವಲಿ ನಾಯಕ ಕಳಿಸುವ ಸಂದೇಶವಾದರೂ ಏನು? ಕೊತ ಕೊತ ಕುದಿವ ಬಾಳ ಕಣ್ಣೀರ ಗೋಳು. ಆ ಮೇಘಸಂದೇಶದ ನಾಯಕನಿಗೆ ಶಿಕ್ಷೆಯ ಕಾಲ ಪರಿಮಿತಿ ಕೇವಲ ಒಂದು ವರ್ಷವಾದರೆ, ಬಾವಲಿನಾಯಕನಿಗೆ ಶಿಕ್ಷೆಯಾದರೊ ಆ ಜನ್ಮಾಂತರ, ತಲತಲಾಂತರ. ಮೇಘಸಂದೇಶದ ನಾಯಕ ಮನ್ಮಥಾಗ್ನಿ ತಪ್ತನಾದರೆ, ಬಾವಲಿ ನಾಯಕ ಕ್ಷುಧಾಗ್ನಿ ಪೀಡಿತ.

ಕಾವ್ಯದ ಕೊನೆಯ ಘಟ್ಟದಲ್ಲಿ ಬರುವ, ನಾಯಕನ ಮೂಲಕ ಕವಿಜಾಷುವಾ ಅವರ ಮಡುಗಟ್ಟಿದ ದುಃಖ ಸಾಕ್ಷಾತ್ಕಾರಕ್ಕೆ ಪ್ರತೀಕವಾಗಿ ಈ ಪದ್ಯ ಗಮನಿಸಬಹುದು.[10]

> "ಕನಬಡಲೇದು ದೈವತಮುಗಾನಿ ಪದಾರ್ಥಮು ಭಾರತಂಬುನನ್
> ಗನುಪಡಲೇದು ವರ್ಣನಮುಕನ್ನ ಮಹಾಕಳ ಭಾರತಂಬುನನ್
> ಕನುಪಡಲೇದು ಸತ್ಕುಲಮುಕನ್ನ ಪಿಶಾಚಮು ಭಾರತಂಬುನನ್
> ಗನುಪಡಲೇದು ಪಂಚಮುನಿಕನ್ನನು ನೀಚಪುಜಂತು ವೇದಿಯುನ್"

ಭಾರತದಲ್ಲಿ ದೈವತ್ವ ಪಡೆಯದ ವಸ್ತು ಯಾವುದೂ ಕಾಣುತ್ತಿಲ್ಲ. ಅಂತೆಯೇ ಭಾರತದಲ್ಲಿ ವರ್ಣನೆಗಿಂತ ಮಹತ್ತರವಾದ ಕಲೆ ಬೇರೊಂದು ಕಾಣುತ್ತಿಲ್ಲ. ಹಾಗೆಯೇ ಭಾರತದಲ್ಲಿ ಮೇಲುವರ್ಗಕ್ಕಿಂತ ದೊಡ್ಡ ಪಿಶಾಚಿ ಕಾಣುತ್ತಿಲ್ಲ. ಆದರೆ ಈ ಪಂಚಮನಿಗಿಂತ ಕೀಳಾದ ಜಂತು ಭೂಮಿಯಲ್ಲಿಯೇ ಕಾಣುತ್ತಿಲ್ಲ.

---

10. ಗಬ್ಬಿಲಮು, ಲೇ : ಗುರ್ರಂ ಜಾಷುವಾ, ಪುಟ 71, ಪ್ರ : 1982

ಕ್ರಾಂತಿಕವಿ ಶ್ರೀ ಶ್ರೀ ತಮ್ಮ ಮೊಟ್ಟಮೊದಲ ಸಂಕಲನ "ಮಹಾಪ್ರಸ್ಥಾನಂ"ನ "ಋಕ್ಕುಲು" ಎಂಬ ಕವಿತೆಯಲ್ಲಿ ಹೇಳುತ್ತಾರೆ (14-4-1934ರಲ್ಲಿ) :

"ಹೀನಂಗಾ ಚೂಡಕು ದೇನ್ನೀ !
ಕವಿತಾಮಯಮೇನೋಯ್ ಅನ್ನೀ !"
"ನೀವೇಪೇ ಚೂಸ್ತೂ ಉಂಟಾಯ್ !
ತಮಲೋತು ಕನುಕ್ಕೋಮಂಟಾಯ್ !"
"ಕಾದೇದೀ ಕವಿತ ಕನರ್ಹಂ !
ಔನೌನು ಶಿಲ್ಪಮನರ್ಘಂ !"
"ಕಳ್ಳಂಟೂ ಉಂಟೆ ಚೂಸಿ,
ವಾಕ್ಕುಂಟೇ ವ್ರಾಸೀ !"

ಯಾವುದನ್ನೂ ಹೀನವಾಗಿ ನೋಡಬೇಡ, ಎಲ್ಲವೂ ಕವಿತಾಮಯವೇ, ಎಲ್ಲವೂ ನಿನ್ನ ಕಡೆಗೇ ನೋಡುತ್ತಿರುತ್ತವೆ, ನಮ್ಮ ಆಳ ತಿಳಿದುಕೋ ಎನ್ನುತ್ತವೆ, ಯಾವುದೂ ಕವಿತೆಗೆ ಅನರ್ಹವಲ್ಲ, ಖಂಡಿತಾ ಶಿಲ್ಪಕ್ಕೆ ಅನರ್ಘವಾದವೇ, ಕಣ್ಣಿದ್ದರೆ ನೋಡಿ, ಬರಹ ಬಂದರೆ ಬರೆದು ಬಿಡು—ಎಂದು ಕವಿ ಕರೆಕೊಟ್ಟಿದ್ದಾರೆ.

ಅರುಂಧತೀ ಪುತ್ರನಾದ ಜಾಷುವಾಗೆ ತನ್ನ ಜನಾಂಗಕ್ಕಿಂತ ಕೀಳಾದ, ತನ್ನ ಗೋಳಿಗಿಂತ ಭಿನ್ನವಾದ ಇನ್ನೊಂದು ವಸ್ತು ಹುಡುಕಿಕೊಂಡು ಹೋಗುವ ಅವಶ್ಯಕತೆಯೇ ಇಲ್ಲವಷ್ಟೆ. ಹೀಗಾಗಿ ತಾನು ಕೈಗೆ ತೆಗೆದುಕೊಂಡ ಪ್ರತಿ ವಿಷಯ ವಸ್ತುಗಳಲ್ಲಿ ತನ್ನ ನೋವನ್ನೇ ತನ್ನ ಅಳಲನ್ನೇ ತನ್ನ ಜನಾಂಗದ ದುಃಖ ದುಮ್ಮಾನವನ್ನೇ ಅಕ್ಷರೀಕರಿಸಿದ್ದಾರೆ.

"ಪಂಚಮುಡು" ಎಂಬ ಒಂದು ಕವಿತೆಯಲ್ಲಿ ಕವಿ:[11]

"ಮುಸಲಿವಾಡೈನ ಬ್ರಹ್ಮಕು ಬುಟ್ಟಿನಾರು
ನಲುವುರು ಕುಮಾರುಲನುಟ ವಿನ್ನಾಮುಗಾನಿ
ಪಸರಮುಕನ್ನಾ ಹೀನುಡಭಾಗ್ಯುಡೈನ
ಯ್ಯೆದವ ಕುಲಸ್ಥುಡೆವ್ವರಮ್ಮಾ ! ಸವಿತ್ರಿ !"

ನೇರವಾಗಿ ವಾಕ್ ದೇವಿಯನ್ನೆ ಕೇಳುತ್ತಿದ್ದಾನೆ ಕವಿ : ಮುದುಕನಾದ ಬ್ರಹ್ಮನಿಗೆ ಅರ್ಥಾತ್ ಅವನಿಂದ ನಿನಗೆ, ನಾಲ್ಕು ಜನ ಮಕ್ಕಳಾದರೆಂದು ಕೇಳಿದ್ದೇವೆ. ಆದರೆ ದನಗಳಿಗಿಂತ ಕೀಳಾದ ದರಿದ್ರನಾದ ಈ ಐದನೇ ಕುಲಸ್ಥ 'ಪಂಚಮ' ಯಾರವ್ವಾ ? ಯಾರ ಮಗ ಇವ? ಎಂದು ಕೇಳುವಲ್ಲಿನ ನಿರಾಶೆ, ಕೋಪ, ಎದೆ

---

11. ಖಂಡಕಾವ್ಯಮು (ರೆಂಡವ ಭಾಗಮು), ಲೇ: ಗುರ್ರಂ ಜಾಷುವಾ, ಪುಟ 25, ಪ್ರ: 1983

ಗಾರಿಕೆ, ಧೀಮಂತಿಕೆ–ಶಬ್ದದಿಂದ ಹುಟ್ಟಿರುವುದಲ್ಲ, ಒಡಲಾಳದಿಂದ ನೆಲದಾಳದಿಂದ ಸೀಳಿಚಿಮ್ಮಿದ್ದು.

ಹಿಂಬದಿಗೆ ರಾಯಪ್ರೋಲು ಸುಬ್ಬಾರಾವ್ ನೇತೃತ್ವದ ಭಾವ ಕವಿಗಳು, ಸಹಬದಿಗೆ ನಖಶಿಖಾಂತ ಕರ್ಮಠ ಕವಿಪುಂಗವ ವಿಶ್ವನಾಥ ಸತ್ಯನಾರಾಯಣ, ಮುಂಬದಿಗೆ ಸಾಮ್ಯವಾದದ ಆವೇಗ–ಆವೇಶ ಹೊತ್ತು ಪ್ರಜೆಗಳ ನಡುವೆ ಧುಮುಕಿದ ಶ್ರೀ ಶ್ರೀ-ಇವರೆಲ್ಲರ ನಡುವೆ ಒಂದು ದ್ವೀಪವಾಗಿ ನಿಲ್ಲುವ ಜಾಷುವಾ, ಕೊನೆಕೊನೆಗೆ ವ್ಯವಸ್ಥೆಗೆ ಒಲಿದು ಹೋದವರಾದರು. ಅವರ ಉತ್ತರಾರ್ಧದ ಕಾವ್ಯಗಳು ಹೀಗಾಗಿ ತೋರಿಕೆಯ ಬಡಬಡಿಕೆಯಾಗಿ ಕಾಣಿಸುತ್ತವೆ. ಎಲ್ಲಕ್ಕೂ ಮಿಗಿಲಾಗಿ, ಅರುಂಧತೀ ಪುತ್ರನಾದ ಜಾಷುವಾ, ಕ್ರಿಸ್ತನ ಕರುಣಾಪುತ್ರನಾಗಿ 'ವಿಶ್ವನರನಾಗಿ' ಹೋದ ಕತೆ, ಅಂಬೇಡ್ಕರ್ ಅವರ ಬುದ್ಧ ಭಾರತದಲ್ಲಿ ಸೋಜಿಗವೇನಿಲ್ಲವಷ್ಟೆ !

ಗುರ್ರಂ ಜಾಷುವಾ ನಂತರ, ಅಭ್ಯುದಯ ಕವಿತ್ವ ಹಾಗೂ ದಿಗಂಬರ ಕವಿತ ಚಳುವಳಿಗಳ ನಡುವೆ ಎದ್ದು ನಿಂತ ದಲಿತ ಕವಿ, ಬೋಯಿ ಭೀಮನ್ನ. ಚರಿತ್ರೆಯನು ಆಗಿನ ಕಾಲಕ್ಕೆ ಹೊರಳಿಸಿ ನೋಡುವುದಾದರೆ : ಪ್ರಪಂಚ ಎರಡನೇ ಮಹಾಯುದ್ಧ ಕಂಡಿತ್ತು. ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತ್ತು. ಪ್ರಜಾ ಪ್ರಭುತ್ವದ ಹೆಸರಿನಲ್ಲಿ ಸ್ವಜನತು ಅಧಿಕಾರಾಕ್ರಮಣ ನಡೆಸಿದ್ದರು. ಗಾಂಧೀಜಿಯನ್ನು ಕೊಂದು, ಗಾಂಧೀ ತತ್ತ್ವ ಸಿದ್ಧಾಂತ ಜೀವನ ಕ್ರಮಗಳಿಗೇ ತರ್ಪಣ ಅರ್ಪಿಸಲಾರಂಭಿಸಿದ್ದರು. ಪಾಶ್ಚಾತ್ಯ ವಾದಗಳು ಸಿದ್ಧಾಂತಗಳ ನಡುವೆ ಅಂಬೇಡ್ಕರ್ ಅವರ ಬದುಕು ಬರಹ ಹೋರಾಟಗಳು ಪ್ರಖರ್ ಮೌಲ್ಯಮಾಪನಕ್ಕೆ ಜಾಗೃತಿಗೆ ಕಾರಣವಾಗಿದ್ದವು. ಅಷ್ಟೇಕೆ, ನಾಡಿನಲ್ಲಿಯೇ ತೆಲಂಗಾಣ ಹೋರಾಟ ನಡೆದು ಪ್ರಜೆಗಳು ಶಸ್ತ್ರ ಹೋರಾಟ ನಡೆಸಿದ್ದರು. ಮುಂದುವರಿದು, ಶ್ರೀ ಕಾಕುಳಂನಲ್ಲಿ ಭೂಷಾಹಿಗಳ ವಿರುದ್ಧ ಕೂಲಿ ಕಾರರು ರಕ್ತ ಕ್ರಾಂತಿ ನಡೆಸಿದ್ದರು. ಪಾಣಿಗ್ರಾಹಿ ಸುಬ್ಬಾರಾವ್ ಅವರಂತಹ ಪ್ರಜಾ ಕವಿಗಳ ತಂಡ ಪೆನ್ನು ಗನ್ನುಗಳಿಗೆ ಭೇದ ಮರೆತು ಪ್ರಜೆಗಳ ನೆರವಿಗೆ ನಿಂತಾಗ, ಪ್ರಜಾ ಪ್ರಭುತ್ವದ ಹೆಸರಿನಲ್ಲಿ ಆಳಲು ಹೊರಟ ಪೋಲೀಸ್ ಸರಕಾರದ ಗುಂಡಿಗೆ ಬಲಿಯಾಗಬೇಕಾಯಿತು.

ಹೀಗಿರುವಾಗ, ದಲಿತ ಕವಿಯಾದ ಬೋಯಿ ಭೀಮನ್ನ ಅವರು ವಿಶ್ವಶಕ್ತಿ ಯೊಂದಿದೆ ಎಂಬ ನಂಬಿಕೆ ಇಟ್ಟುಕೊಂಡು, ಮಾನವನ ಜೀವನದ ಲಕ್ಷ್ಯ, ಮಧುರವಾಗಿ ಬದುಕುವುದು ಎಂದು ಕರೆಕೊಟ್ಟರು. ಈ ಲಕ್ಷ್ಯ ಸಾಧನೆಗೆ ಮತ, ವರ್ಗ, ಸ್ವಾರ್ಥ ಗಳಿಲ್ಲದ ಸಮಾಜ ನಿರ್ಮಾಣಗೊಳ್ಳಬೇಕು; ಅನ್ನ, ಬಟ್ಟೆ, ಗೂಡು ಪ್ರತಿ ಮನುಷ್ಯ ನಿಗೂ ಕೊರತೆಯಾಗದಷ್ಟು ಇರಬೇಕೆಂದು, ಅದನ್ನು ಸರಕಾರ ಒದಗಿಸಬೇಕೆಂದೂ ಆಶಿಸಿದರು. ಇವೆಲ್ಲವೂ ಸಾಧ್ಯವೇ ? ಎನ್ನುವವರಿಗೆ, ಸಾಧ್ಯ ಎಂದೇ ಕವಿ ಭೀಮನ್ನರ ಉತ್ತರ. ನಿಜವಾದ ಒಂದು ಜನರೇಷನ್ ಗ್ಯಾಪನ್ನು ಸಮಾಜ ಪಡೆಯ ಬಲ್ಲುದಾದರೆ ಅವೆಲ್ಲ ದಕ್ಕುತ್ತದೆ ಎಂದು ಅವರು ತಿಳಿಯ ಹೇಳುತ್ತಾರೆ. ಕವಿಭೀಮನ್ನ

ಬಯಸುವ ಆ ಜನರೇಷನ್ ಗ್ಯಾಪ್ ಯಾವುದೆಂದರೆ: ಸಂಪ್ರದಾಯವನ್ನು ಕಿತ್ತೊಗೆದು, ಮತದ ಸ್ಥಾನದಲ್ಲಿ ವಿಜ್ಞಾನ ಏರಿಸುವ ಯುವ ಜನಾಂಗ ಯುವಶಕ್ತಿ.

"ಗುಡಿಸೆಲು ಕಾಲಿಪೋತುನ್ನೈ!
ಓಹೋ, ಕಾಲಿಪೋತುನ್ನೈ!
ಎವರಿಗುಡಿಸೆಲೋ, ಪಾಪಂ!
ಮಾಲ ಮಾದಿಗಲವೇ ಅಯಿವುಂಟೈ,
ಗುಡಿಸೆಲು ಮರೆವರಿಕುಂಟೈ?"[12]

ಗುಡಿಸಲು ಉರಿಯುತ್ತಿವೆ. ಓಹೋ, ಉರಿಯುತ್ತಿವೆ. ಯಾರ ಗುಡಿಸಲೋ, ಪಾಪ. ಹೊಲೆಯ ಮಾದಿಗರ ಗುಡಿಸಲೇ ಆಗಿರುತ್ತವೆ. ಗುಡಿಸಲು ಮತ್ತಾರಿಗಿರುತ್ತವೆ?-ಎಂಬ ಪ್ರಶ್ನೆ, ವ್ಯಂಗ್ಯ, ನಿರ್ಮಮಕಾರದಿಂದ ನುಡಿಯುವ ಕವಿ, ಪ್ರತಿ ವರ್ಷವೂ ಧರ್ಮ ಸಂಸ್ಥಾಪನಾರ್ಥವಾಗಿ ಆ ಗುಡಿಸಲು ಮತ್ತೆ ಮತ್ತೆ ಉರಿದು, ಮತ್ತೆ ಮತ್ತೆ ಅವತರಿಸುತ್ತವೆ ಎಂದು ಲೇವಡಿ ಮಾಡುತ್ತಾ, ಕೊನೆಗೆ "ಅದರ ರಹಸ್ಯ ಗುಡಿಸಲಿನವರಿಗೆ ತಿಳಿಯುವವರೆಗೆ" ಹೀಗೇ ನಡೆಯುತ್ತಿರುತ್ತದೆ ಎನ್ನುತ್ತಾರೆ. ಆಳುವ ಪ್ರಜಾಪ್ರಭುತ್ವದ ಸರಕಾರ, ಮೇಲು ವರ್ಗದವರ ರಾಜಕೀಯ ತಂತ್ರ-ಆಶಯವನ್ನು ಈ ಶಬ್ದಗಳ ನಡುವೆ ಕವಿಮಿಡಿಸಲು ಯತ್ನಿಸಿದಂತೆ ಕಾಣುತ್ತದೆ.

ಅದೇ ರೀತಿ 'ಬಾನಿಸಲ ಜಾಬಿತಾ' (ಗುಲಾಮರ ಪಟ್ಟಿ) ಎಂಬ ಇನ್ನೊಂದು ಕವಿತೆಯಲ್ಲಿ;

"ಪ್ರಭೂ, ಮಾ ಪೇರ್ಲನು
ವೋಟರ್ಲ ಜಾಬಿತಾನುಂಚಿ ತೊಲಗಿಂಚಿ
ಬಾನಿಸಲ ಜಾಬಿತಾಲೋ ಚೇರ್ಪಿಂಚಂಡಿ!
ಚಚ್ಚಿ, ಮೀ ಕಡಪುನ ಪುಡತಾಂ!"

ಪ್ರಭೂ, ನಮ್ಮ ಹೆಸರುಗಳನ್ನು ವೋಟರುಗಳ ಪಟ್ಟಿಯಿಂದ ಕಿತ್ತು, ಗುಲಾಮರ ಪಟ್ಟಿಯಲ್ಲಿ ಸೇರಿಸಿರಿ. ಸತ್ತು ನಿಮ್ಮ ಹೊಟ್ಟೆಯಲ್ಲಿಯೇ ಹುಟ್ಟುತ್ತೇವೆ. ಎಂದು ಸಿಡಿಮಿಡಿಗೊಳ್ಳುವ ಕವಿ ಭೀಮನ್ನ, ಮುಂದುವರಿದು, ಗುಲಾಮರ ಪಟ್ಟಿ ಈಗಿಲ್ಲ, ರಾಜರ ಆಳ್ವಿಕೆಯಲ್ಲಿ ಅದು ಇತ್ತು ಎನ್ನುವಿರಾ ಎಂಬ ಪ್ರಶ್ನೆ ಹಾಕಿ, ಹಾಗಾದರೆ ಗುಲಾಮರ ಪಟ್ಟಿ ಜಾಗದಲ್ಲಿ ವೋಟರುಗಳ ಪಟ್ಟಿ ಬಂದಿದೆ ಎನ್ನುತ್ತೀರಾ? ಎಂದು ಎದೆಗೆ ಗುದ್ದುತ್ತಾರೆ. ಸ್ವಾತಂತ್ರ್ಯಾನಂತರದ ಪ್ರಜಾಪ್ರಭುತ್ವದ ಹಣೇಬರಹಕ್ಕೆ ಬೆಂಕಿ ಹಚ್ಚುವ ಕವಿ, ತನ್ನನ್ನು ತಾನು ತಿಳಿದುಕೊಂಡು ತನ್ಮಯತ್ವ

---

12 ಗುಡಿಸೆಲು ಕಾಲಿಪೋತುನ್ನೈ, ಲೇ: ಬೋಯಿ ಭೀಮನ್ನ, ಪ್ರ: 1977

ವನ್ನು ಪಡೆದಾಗಲೇ ಆನಂದ ರಸಾದ್ವೈತ ಸಿದ್ಧಿಸುತ್ತದೆ ಎನ್ನುತ್ತಾರೆ ಇನ್ನೊಂದು ಕವಿತೆಯಲ್ಲಿ. ಅಂತೂ ಕೆಳವರ್ಗದಿಂದ ಬಂದರೂ ಬೂರ್ಜ್ವಾ ವರ್ಗದ ಪ್ರತಿನಿಧಿಯಾಗಿ ನಿಲ್ಲುವ ಕವಿ ಭೀಮನ್ನ; ಸಂಘಟನೆ, ಚಳುವಳಿ, ಕೊನೆಗೆ ಕಾವ್ಯಮಾಧ್ಯಮವನ್ನೂ ಹೀಗಳೆಯುತ್ತಾರೆ.

ಇವರ ನಂತರ ಕೊಲಕಲೂರಿ ಇನಾಕ್ ಮುಂತಾದವರು ಇತ್ತೀಚೆಗೆ ದಲಿತ ವರ್ಗದ ಸಾಹಿತ್ಯ ಸೃಷ್ಟಿ ಕೈಗೊಂಡಿದ್ದಾರೆ.

ಒಟ್ಟಾರೆ : ತೆಲುಗು ಸಾಹಿತ್ಯದಲ್ಲಿ ದಲಿತರನ್ನು ಕುರಿತ ಸಾಹಿತ್ಯ, ದಲಿತರೇ ಬರೆದ ಸಾಹಿತ್ಯ ಎಷ್ಟು, ಯಾವ ಬಗೆಯದು ಎಂಬುದನ್ನು ಈವರೆಗೆ ಕಂಡದ್ದಾಯಿತು. ಆದರೆ, ಪ್ರಾರಂಭಕ್ಕೇ ಹೇಳಬೇಕಾಗಿದ್ದ ಒಂದು ಮಾತು-ತೆಲುಗು ಸಾಹಿತ್ಯದಲ್ಲಿ ದಲಿತ ಎನ್ನುವ ಒಂದು ಪಂಥ, ಒಂದು ಮಾರ್ಗ, ಒಂದು ಚಳುವಳಿ ಈವರೆಗೂ ಹರಿದು ಬರಲಿಲ್ಲ. ಅದಕ್ಕೆ ಮುಖ್ಯ ಕಾರಣ : ವೀರೇಶಲಿಂಗಂ ಅಂತಹ ಅಪ್ರತಿಮ ಸಂಸ್ಕರಣ ವಾದಿಗಳು ಆಧುನಿಕಯುಗದ ಪ್ರಾರಂಭಕ್ಕೇ ನಾಡಿನಲ್ಲಿ ಮೂಡಿಬಂದದ್ದು. ಆ ಪರಂಪರೆಯೇ ಅಭ್ಯುದಯ ಕವಿತ್ವ ಚಳುವಳಿ, ದಿಗಂಬರ ಕವಿತ್ವ ಚಳುವಳಿ, ನಕ್ಸಲೈಟ್ ಎನ್ನುವ ಮಟ್ಟಿನ ಪ್ರಜಾ ಸಾಹಿತ್ಯ ಚಳುವಳಿ('ವಿಪ್ಲವ ರಚಯಿತಲ ಸಂಘಂ' ಇದರ ಬೆನ್ನೆಲಬು). ಹೀಗಾಗಿ ಸಮಕಾಲೀನ ತೆಲುಗು ಸಾಹಿತ್ಯದ ಸಂವೇದನೆ ಎಂದರೆ ಪ್ರಜಾ ಕವಿಗಳ ಕ್ರಾಂತಿಕಾರಿ-ರಾಜಕೀಯ ಹೋರಾಟವೇ ಹೊರತು, ದಲಿತ ಜನಾಂಗದ ಸಂವೇದನೆಯ ಚಳುವಳಿಯಲ್ಲ. ಆದರೆ, ದಲಿತ ವರ್ಗದಿಂದ ಬಂದಿದ್ದರೂ ಗದ್ದರ್ ಅಂತಹ ಪ್ರಜಾಕವಿಯನ್ನು ಈ ಹಿನ್ನೆಲೆಯಲ್ಲಿ ನೋಡುವುದು ಸಾಧ್ಯವಾಗದ ಮಾತು. (ಉದಾಹರಣೆಗೆ, "ಗದ್ದರ್ ಪಾಟಲು" ಪುಸ್ತಕದ[13] "ಯಾಲರೋ ಯಿೂ ಮಾದಿಗ ಬತುಕು", ವರ್ಗ ಹೋರಾಟದ ಕತೆಯನ್ನೇ ಹೇಳುತ್ತದೆಯೇ ಹೊರತು, ವರ್ಣ ಹೋರಾಟದ ಬಗ್ಗೆಯಲ್ಲ. ಇಲ್ಲಿ 'ಮಾದಿಗ ಬತುಕು' ಎನ್ನುವ ಒಂದು ಸ್ಥಿತಿಯಿಂದ ಎಲ್ಲ ಶ್ರಮ ಜೀವಿಗಳ ವಿಮುಕ್ತಿಗೊಳಿಸಲು ಗದ್ದರ್ ದನಿ ಎತ್ತಿದ್ದಾರೆಯೇ ಹೊರತು, ಹುಟ್ಟಿನಿಂದ ಹೊಲೆಯರಾದ ಬಗ್ಗೆಯಲ್ಲ. ಆ ಆಶಯವನ್ನು ಅವರು-ಅವರಂತಹ ಪ್ರಜಾ ಕವಿಗಳು ಒಪ್ಪುವುದಿಲ್ಲ.) ಆ ಕುರಿತ ವಿವರಣೆ ವಿಶ್ಲೇಷಣೆ ಈ ಪ್ರಬಂಧದ ಚೌಕಟ್ಟಿಗೆ ಬೇರೆಯಾದದ್ದು ಎಂದು ಸೂಚಿಸಲು ಮಾತ್ರ ಇಚ್ಛಿಸುತ್ತೇನೆ.

---

ಕೃಪೆ : ದಿನಾಂಕ 14,15 ಮಾರ್ಚ್ 1986ರಂದು ಕಾಸರಗೋಡು ಸರಕಾರಿ ಕಾಲೇಜಿನ ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗದವರು ನಡೆಸಿದ "ದಕ್ಷಿಣ ಭಾರತೀಯ ಸಾಹಿತ್ಯದಲ್ಲಿ ದಲಿತ ಸಂವೇದನೆ" ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

ಈ ಪ್ರಬಂಧ ರಚನೆಯಲ್ಲಿ ತಮ್ಮ ಸಲಹೆ ಸಹಕಾರ ನೀಡಿದ ಶ್ರೀಮತಿ ವಿಜಯಾ ಮತ್ತು ಶ್ರೀ ಘಟ್ಟಮರಾಜು ಅವರಿಗೆ ಉಪಕೃತನಾಗಿದ್ದೇನೆ.

---

13 ಗದ್ದರ್ ಪಾಟಲು, ಜನನಾಟ್ಯ ಮಂಡಲಿ ಪ್ರಚುರಣಲು, ಪ್ರ : 1981

# ಸಾಹಿತ್ಯ ಜನಪರ ಮಾಧ್ಯಮವಾಗಿ-ಕೆಲವು ಆಲೋಚನೆಗಳು

ಯು. ಎಸ್. ಶ್ರೀಧರ ಆರಾಧ್ಯ

'ಸಾಹಿತ್ಯ' ಎಂಬ ಪದರೂಪವನ್ನು ಎಲ್ಲರೂ ಸಾಮಾನ್ಯವಾಗಿ ಬಳಸುತ್ತಿರುವುದು ಹೌದಾದರೂ, 'ಹಾಗೆಂದರೇನು ?' ಎಂಬ ಪ್ರಶ್ನೆ ಹಾಕಿದರೆ ಉತ್ತರಕ್ಕಾಗಿ ತಡಕಾಡುವವರದೇ ಸಂಖ್ಯೆ ಹೆಚ್ಚು. ಈ ಪದದ ಬಳಕೆಯನ್ನು ಗಮನಿಸಿದಾಗ ಅದರ ಶಬ್ದಶಃ ಅರ್ಥದಲ್ಲಿ ಸ್ಥೂಲವಾಗಿಯೂ, ವಸ್ತುನಿಷ್ಠ ಅರ್ಥದಲ್ಲಿ ಸೂಕ್ಷ್ಮವಾಗಿಯೂ ವ್ಯವಹೃತವಾಗುವುದನ್ನು ಗಮನಿಸಬಹುದು. 'ಸಾಹಿತ್ಯ ಚೆನ್ನಾಗಿದ್ದರೆ ಅಡಿಗೆ ಚೆನ್ನಾಗುತ್ತದೆ' ಎಂಬ ಪ್ರಯೋಗದಲ್ಲಿ ಅಡಿಗೆ ಯಂಥ ವಿಶೇಷವೊಂದನ್ನು ತಯಾರು ಮಾಡಲು ಬೇಕಾದ ನಿರ್ದಿಷ್ಟಪಡಿಸಿದ ಪದಾರ್ಥಗಳು ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತದೆ. ಸಾಹಿತ್ಯ ಶಾಸ್ತ್ರದ ಹಿನ್ನೆಲೆಯಲ್ಲಿ ಯೋಚಿಸಿದರೆ ಆಶ್ಚರ್ಯ ಎಂದು ತೋರಿದರೂ ಈ ಅರ್ಥ ನನಗೆ ತಿಳಿದಂತೆ ಸಂಸ್ಕೃತ ಭಾಷೆಯ ಪ್ರತ್ಯಕ್ಷ ಅಥವಾ ಪರೋಕ್ಷ ಪರಿಚಯದ ಹಿನ್ನೆಲೆಯಿರುವ ಬ್ರಾಹ್ಮಣ ಅಥವಾ ಸದೃಶ ವರ್ಗದ ಜನರಲ್ಲಿ ಬಳಕೆಯಾಗುತ್ತದೆ.

ಮತ್ತೊಂದು, 'ಕಾವ್ಯ' ಎನ್ನುವ ಅರ್ಥದಲ್ಲಿ–ಹಳೆಯ ಕಾಲದಲ್ಲಿಯೂ ; Literature ಎನ್ನುವ ಪದದ ಸಂವಾದಿ ಪದವಾಗಿ ಈಗಲೂ ಬಳಕೆಯಾಗುತ್ತದೆ. ಇದಕ್ಕಿರುವುದು ಇದೊಂದೇ ಅರ್ಥ ಎನ್ನುವಷ್ಟು ಪ್ರಮುಖವಾಗಿ ಈ ಅರ್ಥ ಚಾಲ್ತಿಯಲ್ಲಿದೆ.

ಈ ಪದವಲಯದಲ್ಲಿ ಸುಳಿಯುವ ಈ ಎರಡೂ ಅರ್ಥಗಳನ್ನು ಏಕೆ ಪ್ರಸ್ತಾಪಿಸಬೇಕಾಯಿತೆಂದರೆ 'ಸಾಹಿತ್ಯ' ಎನ್ನುವುದಕ್ಕೆ 'ಏನನ್ನೊ ವಿಶಿಷ್ಟವಾದದ್ದನ್ನು ಸೃಷ್ಟಿಸುವ ನೈಪುಣ್ಯ ; ಯಾವುದನ್ನೋ ಉಂಟುಮಾಡಲು ಬೇಕಾದ ವಿಶಿಷ್ಟ ಸಾಧನ' ಎಂಬ ಅರ್ಥ ಅದಕ್ಕಿದೆ ಎನ್ನುವುದನ್ನು ಗ್ರಹಿಸುವುದಕ್ಕಾಗಿ ಮಾತ್ರ. ಇನ್ನು ಕಾವ್ಯ ಪ್ರಪಂಚದಲ್ಲಿ ಬಳಕೆಯಾಗಿರುವ 'ಸಾಹಿತ್ಯ' ಪದದ ಶಾಸ್ತ್ರೀಯ ಅರ್ಥವನ್ನು ಗಮನಿಸಿದರೆ, ನಮ್ಮ ಪೂರ್ವಕಾಲದ ಮೀಮಾಂಸಕರು 'ಶಬ್ದ ಮತ್ತು ಅರ್ಥಗಳ ಸಹಿತತೆಯೇ ಸಾಹಿತ್ಯ' (ಕಾವ್ಯ) ಎಂದರು. ತೀರ ಮೇಲ್ಮಟ್ಟದಲ್ಲೇ ಇದರ ಅರ್ಥ ತೆಗೆದುಕೊಂಡರೆ ಒಬ್ಬರು ಆಡಿದ ಮಾತು ಮತ್ತೊಬ್ಬರಿಗೆ ಅರ್ಥವಾದರೆ ಸಾಕು ಅದು ಸಾಹಿತ್ಯವಾಗಬೇಕು. ಆದರೆ ಶಬ್ದ ಅರ್ಥಗಳ ಸಹಿತತೆಯೇ ಕಾವ್ಯ ಎಂದವರು ನಿಲ್ಲದೇ ಆ ಸಹಿತತ್ವ ಕಾವ್ಯವೆನಿಸಿಕೊಳ್ಳುವಾಗ ವಿಶೇಷ ರೀತಿಯ ಶಬ್ದ ಮತ್ತು ಅರ್ಥಾಲಂಕಾರಗಳಿಂದ ಅಲಂಕೃತಗೊಂಡಿರುತ್ತದೆ. ಇವೆಲ್ಲವುಗಳೂ ಒಟ್ಟಾಗಿ ಉಂಟುಮಾಡುವ ರಸವೇ ಕಾವ್ಯದ ಆತ್ಮ...ಇತ್ಯಾದಿ, ವಿವರ ನೀಡಿ ಕಾವ್ಯದ

–ಸಾಹಿತ್ಯದ–ಭಾಷೆ ಸಾಮಾನ್ಯ ಮಾತಿನಿಂದ ಹೇಗೆ ಬೇರೆಯಾಗುತ್ತದೆ ಎಂಬುದನ್ನೂ ಸ್ಪಷ್ಟಪಡಿಸಿದರು. ಅಲಂಕಾರ ಯಾವುದು ? ರಸ ಮುಂತಾಗಿ ಬೇಕಾದಷ್ಟು ಜಿಜ್ಞಾಸೆ ನಡೆಯಿತಾದರೂ ಅದೆಲ್ಲ ಇಲ್ಲಿಗೆ ಅಪ್ರಸ್ತುತವಾದ್ದರಿಂದ ಆಧುನಿಕರಾಗಿ ನಾವೆಲ್ಲ ಒಪ್ಪಿಕೊಳ್ಳಬಹುದಾದಂತಹ "ವಿವಿಧ ವಿಶಿಷ್ಟ ಸಂದರ್ಭಗಳಲ್ಲಿ ಬದುಕುತ್ತಿರುವ ಮಾನವನ ಅನುಭವಗಳನ್ನು ಶೋಧಿಸುವ. ಅರ್ಥೈಸುವ ಬೆರಗು ವಿಸ್ಮಯ ಗಳೊಂದಿಗೆ ಸುಂದರವಾಗಿ ಅಭಿವ್ಯಕ್ತಗೊಂಡ ಆನಂದದಾಯಿಯಾದ ಶಬ್ದಶಿಲ್ಪ" ಎಂದಷ್ಟೇ ಗ್ರಹಿಸಿ ಮುಂದುವರಿಯಬಹುದು.

ಇಲ್ಲಿ ಶಬ್ದ–ಅರ್ಥದ ಸಹಿತತೆಯೆಂದರೆ 'ವಿಶಿಷ್ಟ ಅರ್ಥವನ್ನು ಒಳಗೊಳ್ಳು ವಂಥ ವಿಶಿಷ್ಟ ಪದಗಳು ಸಹಯೋಗ ನಡೆಸುವುದು' ಎಂದರ್ಥ ಮಾಡಿಕೊಳ್ಳೋಣ. ಆಗ ಸಾಹಿತ್ಯದ ಭಾಷೆ ಸಾಮಾನ್ಯ ಮಾತಿಗಿಂತ ಭಿನ್ನವಾದ ಮಾತೆಂದೂ, ಅದರ ಅರ್ಥ (ಕೊಡುವ ಅನುಭವ) ಸಾಮಾನ್ಯ ಅಭಿಪ್ರಾಯಕ್ಕಿಂತ ವಿಶೇಷವಾದದ್ದೆಂದೂ ತಿಳಿಯಬಹುದು. ಇಂಥ ಸಾಹಿತ್ಯವು ಕೇಳುಗನನ್ನು (ಓದುಗನನ್ನು) ಸೂಜಿಗಲ್ಲಿನಂತೆ ಸೆಳೆಯುತ್ತದೆ. ಹಾಗೆ ಸೆಳೆತಕ್ಕೊಳಗಾಗ ಬೇಕಾದ ವಿಶಿಷ್ಟ ಮನಸ್ಸಿನ ಪರಿಪಾಕದ ಯೋಗ್ಯತೆ ಅಥವಾ ಅರ್ಹತೆ ಜನಕ್ಕಿರಬೇಕೆಂಬುದು ಅನಿವಾರ್ಯವಾಗಿದೆ. ಇಂಥ ಸಾಹಿತ್ಯವನ್ನು ಪ್ರವೇಶಿಸಿ ಅದರ ಅರ್ಥಕ್ಕೆ ತೆರೆದುಕೊಂಡು ಅನುಭವಿಸಿದವನಿಗೆ ದೊರಕುವ ವಿಸ್ಮಯ, ಬೆರಗುಗಳಿಂದ ಕೂಡಿದ ರಹಸ್ಯದ ಅನಾವರಣವೊಂದು ಕೇವಲ ಆನಂದವೊಂದನ್ನೇ ಅಲ್ಲದೆ ಅರಿವಿನ ಸಂಸ್ಕಾರಕ್ಕೂ ನೆಲೆಯನ್ನೊದಗಿಸುತ್ತದೆ. ಸಾಹಿತ್ಯದ ಈ ಶಕ್ತಿಯನ್ನೇ ಜನಪರ ವಿಚಾರಗಳ ಪ್ರಚುರಕ್ಕೆ ಬಳಸಿಕೊಳ್ಳಬೇಕಾಗು ತ್ತದೆ. ರಸಾನುಭವ ಅನ್ನುವಂಥದೊಂದು ಇಲ್ಲದಿದ್ದರೂ ಬೌದ್ಧಿಕ ಸಂತೋಷ ನೀಡುವ ವೈಚಾರಿಕ ಮತ್ತು ಶಾಸ್ತ್ರ ಸಾಹಿತ್ಯವಾಗಿಯೂ ಇದು ವ್ಯವಹರಿಸಬಹುದು. ಆದರೆ ಜಿಡುಕಾಗಿ ಜಡವಾಗಿ ಬಿಡಬಹುದಾದ ಶುದ್ಧ ಬೌದ್ಧಿಕತೆಗೆ ಸತ್ವತೆಯನ್ನು ನೀಡಬೇಕಾದರೆ ಅದರ (ಸಾಹಿತ್ಯದ) ಚತುರ ಅಭಿವ್ಯಕ್ತಿ ವಿಧಾನವನ್ನು ಬಳಸಿ ಕೊಳ್ಳಲೇ ಬೇಕಾಗುತ್ತದೆ.

ಹೀಗಿರುವ ಸಾಹಿತ್ಯ ಜನಪರವಾಗಬೇಕಾದರೆ ಎರಡು ಪೂರ್ವ ನಿಬಂಧನೆಗಳನ್ನು ಪಾಲಿಸಲೇಬೇಕಾಗುತ್ತದೆ.

1) ಹೇಳುವುದನ್ನು ಸಾಮಾನ್ಯ ಮಾತಿಗಿಂತ ಭಿನ್ನವಾಗಿ ವಿಶಿಷ್ಟವಾಗಿ ಹೇಳಲೇಬೇಕು. 2) ಹೇಳಲ್ಪಟ್ಟ ಅಂಶ ಸಹೃದಯನ ಮನಸ್ಸನ್ನು ಸಂಸ್ಕರಿಸಿ ತಿಳಿಗೊಳಿಸುವ, ಒಪ್ಪಿಸಿಕೊಳ್ಳುವ ಅಂದರೆ ವಿನಯಶೀಲನನ್ನಾಗಿ ಮಾಡುವ ಶಕ್ತಿ ಯನ್ನು ಹೊಂದಿರಬೇಕು. ಹಾಗೆಂದರೆ ಓದುಗ–

ಅ) ಈ ಸಾಹಿತ್ಯವನ್ನು ಪ್ರೀತಿಸಬೇಕಾದರೆ ಸಾಮಾನ್ಯ ಮಾತಿಗಿಂತ ಭಿನ್ನ ವಾದ ಮಾತನ್ನು ಕೇಳಲು, ತಿಳಿಯಲು ಸಿದ್ಧನಾಗಿರಬೇಕು. ಆ) ಸಾಹಿತ್ಯ ಕೊಡ ಲೆಳೆಸುವ ಸಂಸ್ಕಾರವನ್ನು ಹೃತ್ಪೂರ್ವಕವಾಗಿ ಬರಮಾಡಿಕೊಳ್ಳಬೇಕು.

ಇಷ್ಟು ಹಿನ್ನೆಲೆಯೊಡನೆ ಒಂದು ಮಾಧ್ಯಮ ಜನಪರವಾಗುವುದು ಎಂದರೇನು? ಸಾಹಿತ್ಯ ಸಾಂಸ್ಕೃತಿಕ ಸಂವಹನದ ಒಂದು ಮಾಧ್ಯಮವಾಗಿ ಜನಪರವಾಗುವುದು ಎಂದರೇನು ? ಎಂಬುದನ್ನು ಪರಿಶೀಲಿಸಬಹುದು.

'ಪೂರ್ವಾಗ್ರಹಗಳಿಲ್ಲದೆ ಪ್ರತಿಯೊಬ್ಬನ ಜೀವನವನ್ನು ಸುಖಮಯವನ್ನಾಗಿ ಮಾಡಲು ನ್ಯಾಯಯುತ ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುವುದು' ಎಂದು ಜನಪರವಾಗಿರುವುದು ಎಂಬುದಕ್ಕೆ ವ್ಯಾಖ್ಯೆ ನೀಡಬಹುದು. ಇನ್ನೂ ಸಂಕ್ಷಿಪ್ತವಾಗಿ ಹೇಳುವುದಾದರೆ ಜೀವನ ಪರವಾಗಿರುವುದೇ ಜನಪರವಾಗಿರುವುದು.

ಸ್ವಲ್ಪ ಸೂಕ್ಷ್ಮವಾಗಿ ಇದನ್ನು ವಿಶ್ಲೇಷಿಸುವುದಗತ್ಯ. ಬುದ್ಧಿಯುಳ್ಳ ಜೀವಿಯಾಗಿ ಮಾನವ ತಪ್ಪು ಅನುಭವಗಳನ್ನು ಶೋಧಿಸುತ್ತಾ, ಮತ್ತು ಶೋಧಿಸಿಕೊಳ್ಳುತ್ತಾ ಬದುಕನ್ನು 'ಸುಂದರ' ಮಾಡಿಕೊಳ್ಳುವ ಪ್ರಯತ್ನದ ಚರಿತ್ರೆಯೇ ಸಂಸ್ಕೃತಿಯ ಚರಿತ್ರೆಯೂ ಆಗುತ್ತದೆ. ಸಮಾಜಜೀವಿಯಾಗಿ ಅವನು ಒಗ್ಗಿಕೊಂಡ ಕೂಡಲೇ ಅವನ ಪ್ರತಿಯೊಂದು ಚಟುವಟಿಕೆಯೂ ಸಮಾಜದ ಸುಸಂಗತಿಯ ಕಡೆಗೇ ನಿರ್ದೇಶಿತಗೊಂಡಿತು. ಈ ಅರ್ಥದಲ್ಲಿ ಕೇವಲ ಸಾಹಿತ್ಯ ಮಾತ್ರವಲ್ಲ ಮಾನವ ಸಮಾಜದ ಎಲ್ಲವೂ ಜನಪರವಾಗಿಯೇ ಇರಬೇಕಾಗುತ್ತದೆ. ಹಾಗೆಯೇ ಇರುತ್ತದೆ. ಆದರೆ ಮಾನವ ಜೀವಿ ಏಕಾಂಗಿ ಜೀವನವನ್ನು ಬಿಟ್ಟು ಸಮೂಹ ಜೀವನವನ್ನು ಆಯ್ಕೆ ಮಾಡಿಕೊಂಡಾಗ ಅದಕ್ಕೆ ಒಗ್ಗಿಕೊಳ್ಳುವ ಸವಾಲೂ ಅವನಿಗೆ ದೊರಾಯಿತು. ಇಲ್ಲಿಯೇ ವ್ಯಕ್ತಿಯ ಮೂಲಪ್ರವೃತ್ತಿಗಳಿಗೂ ಸಮೂಹ ಜೀವನಕ್ಕಾಗಿ ಅವುಗಳನ್ನು ನಿಯಂತ್ರಿಸುವ, ಪೋಷಿಸುವ, ಬಹುಸಂದರ್ಭಗಳಲ್ಲಿ ಬಲಿಕೊಡುವ ಸಂದಿಗ್ಧ ಉಂಟಾದದ್ದು. ಹೀಗೆ-ಸಾಮಾಜಿಕ ಜೀವನಕ್ಕೆ ಪೋಷಕವಾಗುವ, ಪೂರಕವಾಗುವ ನಿಯಮಗಳಿಗೆ–ಸಾಮಾಜಿಕ ಮೌಲ್ಯಗಳಿಗೆ–ಹೊಂದಿಕೊಳ್ಳುವ, ಆದರೆ ಹಾಗೆ ಹೊಂದಿಕೊಳ್ಳಬೇಕಾದಾಗ ನಲುಗುವ ಮತ್ತು ಪ್ರತಿಭಟಿಸುವ, ವೈಯಕ್ತಿಕ ಪ್ರವೃತ್ತಿಗಳನ್ನು ಪಳಗಿಸುವ ಸಂಘರ್ಷ ಪ್ರಾರಂಭವಾಯ್ತು–ಕೆಲವು ಮಿತಿಗಳೊಂದಿಗೆ ಹೇಳುವುದಾದರೆ –ಈ ಸಂಘರ್ಷವೇ ಅಂದಿನಿಂದ ಇಂದಿನವರೆಗೆ ಮಹತ್ವಪೂರ್ಣ ಸಾಹಿತ್ಯದ ವಸ್ತುವಾಗಿದೆ. ಅಂದರೆ ಸಾಹಿತ್ಯ 'ವ್ಯಕ್ತಿಪರವಾಗುವ-ಸಮಾಜಪರವಾಗುವ' ತುಯ್ದಾಟವೇ ಇದರ ಮುಖ್ಯ ಲಕ್ಷಣವಾಗಿದೆ. ಅತಿವ್ಯಕ್ತಿಪರವಾಗಿ ಸಮಾಜಜೀವನ ಕಡೆಗಣಿಸಲ್ಪಡುತ್ತಿದೆ ಎನಿಸಿದಾಗ ಸಾಮಾಜಿಕ ಜೀವನಕ್ಕೆ ಪರವಾದ ಶಕ್ತಿಗಳು ಹುಯಿಲೆಬ್ಬಿಸಿ ವ್ಯಕ್ತಿಪರವಾಗಿ ಹೋಗುತ್ತಿರುವ–ಜೀವನ ಮೌಲ್ಯಗಳ ಜೊತೆ ಸಂಘರ್ಷಕ್ಕಿಳಿದು ಅವುಗಳು ಸಮಾಜಪರವಾಗುವಂತೆ ಮಾಡಲು ಶ್ರಮಿಸುತ್ತವೆ.

ಹಾಗೆಯೇ ಬದುಕಿನ ಪ್ರತಿಯೊಂದೂ ಅತಿಯಾಗಿ ಸಮಾಜಪರವಾಗಿ ಹೋಗಿ ವ್ಯಕ್ತಿಯ ಖಾಸಗಿ ಬದುಕಿಗೆ ಬೆಲೆಯೇ ಇಲ್ಲದಂತಾಗಿ ಮೂಲ ಪ್ರವೃತ್ತಿಗಳ ಜೀವಂತಿಕೆಗೆ ಅಗತ್ಯವಾದ, ಅವುಗಳನ್ನು ಸಂತೃಪ್ತಗೊಳಿಸುವ ವ್ಯಕ್ತಿಪರ ಮೌಲ್ಯಗಳು ನಾಶಗೊಳ್ಳುತ್ತಿವೆ, ಎನ್ನಿಸಿದಾಗ ಈ ವ್ಯಕ್ತಿಪರ ಮೌಲ್ಯಗಳಿಗೆ ಪರವಾಗಿರುವ ಶಕ್ತಿಗಳು,

ಬದುಕಿನ ಅತಿ ಸಾಮಾಜಿಕೀಕರಣದ ವಿರುದ್ಧ ಸೆಣಸಿ, ವ್ಯಕ್ತಿಯ ವೈಯಕ್ತಿಕತೆಗೆ ಸಂಬಂಧಿಸಿದ ಖಾಸಗಿತನವನ್ನು ಉಳಿಸಿಕೊಳ್ಳಲು ಹೆಣಗುತ್ತದೆ. ವ್ಯಕ್ತಿಗಾಗಲೀ ಸಮಾಜಕ್ಕಾಗಲೀ ಅಚಲಬದ್ಧತೆ ಸೃಜನ ಶೀಲ ಸಾಧ್ಯತೆಗಳನ್ನು ಕೊಲ್ಲುತ್ತದಾದ್ದರಿಂದ ಈ ಹೋರಾಟ ಅಗತ್ಯವಾಗುತ್ತದೆ. ಈ ಅರ್ಥಪೂರ್ಣ ಹೋರಾಟವೇ ಸಂಗತ ಸಾಹಿತ್ಯದ ಕರ್ತವ್ಯವೂ ಆಗಿರುತ್ತದೆ· ಈ ಎರಡೂ ಪ್ರಕ್ರಿಯೆಗಳನ್ನೂ ಆಯಾ ಸನ್ನಿವೇಶಕ್ಕೆ—ಸಮಕಾಲೀನವಾದ ಸಾಹಿತ್ಯವಸ್ತುವನ್ನಾಗಿ ಹೊಂದಿರುತ್ತದೆ.

ಹೀಗೆಂದ ಮಾತ್ರಕ್ಕೆ ಈ ಎರಡೂ ಒಂದಾದ ಮೇಲೊಂದರಂತೆ–ಪ್ರತ್ಯೇಕ ಪ್ರತ್ಯೇಕವಾಗಿ ನಡೆಯುತ್ತದೆಂದು ಭಾವಿಸುವುದು ತಪ್ಪು. ಒಂದು ಇನ್ನೊಂದರ ನಡುವೆ ಗುರುತಿಸಲಾಗದ ಭಿನ್ನತೆಯಿರುವುದರಿಂದ ಬೇರ್ಪಡಿಸಲಾಗದ ಒಳ ಸಂಬಂಧ ವೊಂದು ಇರುತ್ತದೆ. ಕೆಲವು ವೇಳೆ ಯಾವುದೋ ಒಂದು ಎದ್ದು ಕಾಣುವಂತೆ ತೋರಿದರೂ ಬಹುಮಟ್ಟಿಗೆ–ಏಕಕಾಲದಲ್ಲಿ ಜೊತೆ ಜೊತೆಗೆ ಸಾಗುವ ಕ್ರಿಯೆ ಗಳಾಗಿರುತ್ತವೆ.

ಈಗಿನ ಪರಿಸ್ಥಿತಿಯಲ್ಲಿ ಹೀಗೆ ಸಾಮಾಜಿಕ ಜೀವನವನ್ನು ಹಾಳುಗೆಡಹುವಷ್ಟರ ಮಟ್ಟಿಗೆ ವೈಯಕ್ತಿಕವಾಗಿ ಹೋಗುತ್ತಿರುವ ಮತ್ತು ವ್ಯಕ್ತಿ ಜೀವನವನ್ನು ಹಾಳು ಗೆಡಹುವಷ್ಟು ಸಾರ್ವತ್ರಿಕವಾಗಿ ಹೋಗುತ್ತಿರುವ, ಈ ನಡುವೆ ಮಾನವೀಯ ಮೌಲ್ಯಗಳು ನರಳುತ್ತಿರುವ ಭೀಷಣ ಪರಿಸ್ಥಿತಿಯ ವಿರುದ್ಧ ಹೋರಾಟ ನಡೆಸಿ, ಜೀವನ ಮೌಲ್ಯಗಳು ಜನಪರವಾಗಬೇಕಾದ ಮಾನವೀಯ ನೆಲೆಯಲ್ಲಿ ನಿಲ್ಲಿಸಬೇಕಾದ ಸವಾಲನ್ನೇ ವಸ್ತುವನ್ನಾಗಿ ಸ್ವೀಕರಿಸುವುದೇ ಸಾಹಿತ್ಯ ಈಗ ಜನಪರವಾಗುವುದು ಎಂದು ತಿಳಿಯಬೇಕೆಂದು ಭಾವಿಸಿದ್ದೇನೆ.

ಮೇಲಿನ ವಿವರಣೆಯ ಹಿನ್ನೆಲೆಯಲ್ಲಿ ನಾವು ಸಾಹಿತ್ಯ ಅಗತ್ಯವಾದಾಗ ವ್ಯಕ್ತಿ ಪರವಾಗಿಯೂ—ಸಮಾಜದ ಪರವಾಗಿಯೂ ಕೆಲಸ ಮಾಡುತ್ತದೆ ಮತ್ತು ಮಾಡ ಬೇಕು ಎಂದು ತಿಳಿದಂತಾಯಿತು. ಆದ್ದರಿಂದ 'ಜನಪರ' ಎನ್ನುವುದಕ್ಕೆ ಸನ್ನಿವೇಶಕ್ಕನು ಗುಣವಾಗಿ ಸಾಮಾಜಿಕ ಮೌಲ್ಯಗಳ ವಿಶಾಲ ಚೌಕಟ್ಟನ್ನು ಉಳಿಸಿಕೊಂಡೇ ವ್ಯಕ್ತಿಪರ ವಾಗಿಯೂ ಇರುವುದು ಎಂದೂ ಅರ್ಥವಾಗಬಹುದು ; ಹಾಗೆಯೇ ವ್ಯಕ್ತಿಕೇಂದ್ರಿತ ಹಿತಾಹಿತಗಳೇ ಅತಿಯಾಗಿ ಸಾಮಾಜಿಕ ಸಂಘಟನೆಗೆ ಕುತ್ತುಬರುವಂತಾದಾಗ ಮನುಷ್ಯನ ಖಾಸಗಿತನದ ಆಪ್ತತೆಯನ್ನು ಉಳಿಸಿಯೂ ಸಮೂಹಪರ ಮೌಲ್ಯಗಳನ್ನು ರಕ್ಷಿಸುವು ದರ, ರೂಪಿಸುವುದರ ಪರವಾಗಿರುವುದು ಎಂದೂ ಅರ್ಥವಾಗಬಹುದು. ಏಕೆಂದರೆ ವ್ಯಕ್ತಿಗಳಿಂದಾಗಿಯೇ ಸಮೂಹ —ಅಥವಾ ಸಮೂಹವೆಂದರೆ ವ್ಯಕ್ತಿಗಳ ಕೂಟ.

ಇವೆರಡೂ ಸನ್ನಿವೇಶಗಳಲ್ಲಿ ಸಾಮಾನ್ಯವಾದ ಸಾರ್ವಕಾಲಿಕ ಸತ್ಯಗಳನ್ನಂತೂ ಸದಾ ಸಂವಹಿಸುತ್ತಿರುತ್ತದೆ ಎಂಬುದನ್ನಂತೂ ನಾವು ಸದಾ ನೆನಪಿಟ್ಟುಕೊಂಡಿರ ಬೇಕು. (ಉದಾ:- ಸಾವು—ಮನೋವ್ಯಾಪಾರಗಳು—ಮೂಲಪ್ರವೃತ್ತಿಗಳು)

ಈಗ ಮಾನವ ಸಂಸ್ಕೃತಿಯ ವಿವಿಧ ಅಂಗಗಳ ಮುಖಾಂತರ ಈ ದ್ವಿಮುಖ

ಕಾರ್ಯ ಹೇಗೆ ವ್ಯಕ್ತವಾಗುತ್ತದೆ ಮತ್ತು ಸಾಹಿತ್ಯ ಇವುಗಳ ಜೊತೆ ಮತ್ತು ಇವುಗಳ ಮೂಲಕ ಎಷ್ಟರಮಟ್ಟಿಗೆ ಒಂದು ಮಾಧ್ಯಮವಾಗಿ ಕೆಲಸ ಮಾಡುತ್ತದೆ ಎಂಬುದನ್ನೂ ಕಿಂಚತ್ ಪ್ರಮಾಣದಲ್ಲಾದರೂ ಪರಿಶೀಲಿಸಬಹುದು.

ಚಿತ್ರಕಲೆ, ಶಿಲ್ಪಕಲೆ, ಸಿನಿಮಾ, ನಾಟಕ, ನೃತ್ಯ, ಸಂಗೀತ, ಆಕಾಶವಾಣಿ, ದೂರದರ್ಶನ, ಧ್ವನಿಮುದ್ರಣಗಳಾದ ಕ್ಯಾಸೆಟ್ ಮತ್ತು ಗ್ರಾಮಫೋನ್ ಪ್ಲೇಟ್‌ಗಳು, ಜಾನಪದೀಯವಾದ ಹಾಡು, ಆಟ, ಹರಿಕಥೆ, ಮೊದಲಾದ ಸಂಸ್ಕೃತಿಯು ಸೃಷ್ಟಿಸಿಕೊಂಡಿರುವ ಹಲವಾರು ಕಲಾಮಾಧ್ಯಮಗಳು ಮೂಲಭೂತವಾಗಿ ವೈಯಕ್ತಿಕವಾದದ್ದರಿಂದ ಹಿಡಿದು. ಸಾಮೂಹಿಕವೆನಿಸಿದ್ದರವರೆಗೆ ಭಾವನೆಗಳ ವಿನಿಮಯ, ಬೋಧೆ, ವ್ಯಾಖ್ಯಾನ, ಶೋಧನೆಗಳಿಗಾಗಿಯೇ ಬಳಸಲ್ಪಡುತ್ತವೆ. ಸಾಹಿತ್ಯ ಇತರ ದೃಶ್ಯ, ಶ್ರಾವ್ಯ, ದೃಶ್ಯಶ್ರಾವ್ಯ ಮುಂತಾದ ಎಲ್ಲಾ ಮಾಧ್ಯಮಗಳಿಗೂ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಹೇಗೆ ಪ್ರಮುಖ ಪೂರಣವಾಗಿ ಕೆಲಸ ಮಾಡುತ್ತದೆ (ಮತ್ತು ಮಾಡಬೇಕು) ಎಂಬುದರ ಬಗ್ಗೆ ಕೆಲವು ಮಾತುಗಳನ್ನು ಹೇಳುವುದು ಉಚಿತವಾಗುತ್ತದೆ.

ಸಾಹಿತ್ಯವು ತಾನೇ ಒಂದು ಮಾಧ್ಯಮವಾಗಿ ಮತ್ತು ಇತರ ಸಮೂಹ ಕಲಾಮಾಧ್ಯಮಗಳಿಗೆ ವಸ್ತುವನ್ನು—ಹಂದರವನ್ನು—ಒದಗಿಸುವ ಮೂಲವಾಗಿ ಅನೇಕ ಮುಖ ಕಾರ್ಯಶೀಲತೆಯನ್ನು ಹೊಂದಿದೆ.

1. ವ್ಯಕ್ತಿಪರ ರಕ್ಷಾರ್ಹ ಮೌಲ್ಯಗಳನ್ನು ಸಮೂಹಕ್ಕೆ ಸಂವಹಿಸುವ ಮಾಧ್ಯಮವಾಗಿ.

2. ಸಮೂಹಪರ ರಕ್ಷಾರ್ಹ ಮೌಲ್ಯಗಳನ್ನು ವ್ಯಕ್ತಿಗೆ ತಲುಪಿಸುವ ಮಾಧ್ಯಮವಾಗಿ.

3. ಸಂಸ್ಕೃತಿ ಸಂಗ್ರಹಿಸಿಕೊಂಡಿರುವ ಪರಂಪರೆಯ ಅನುಭವ ಸಂಪತ್ತನ್ನು ಹಿರಿಯ ಜನಾಂಗದ ಸಾಧನೆ. ರಕ್ಷಾರ್ಹ ಮೌಲ್ಯಗಳನ್ನು ಕಿರಿಯ ಜನಾಂಗಕ್ಕೆ ತಲುಪಿಸುವ ಮಾಧ್ಯಮವಾಗಿ.

4. ಕಿರಿಯ ಜನಾಂಗದ ಹೊಸ ಅನುಭವಗಳಿಗಾಗಿ ಇರುವ ತುಡಿತ, ಅವರ ಬದಲಾದ ಸಾಮಾಜಿಕ–ಭೌಗೋಳಿಕ, ಆರ್ಥಿಕ ಪರಿಸ್ಥಿತಿಗಳಿಗನುಗುಣವಾದ ಮಾರ್ಪಾಟುಗಳ ಅಗತ್ಯ ಮತ್ತು ಅಭೀಪ್ಸೆಗಳನ್ನು, ಜೊತೆಗೆ ಹಳೆಯದಕ್ಕೆ ಕಟ್ಟು ಬೀಳುವುದರ ನಿರರ್ಥಕತೆ—ಅಪಾಯಗಳನ್ನು ಹಿರಿಯ ಜನಾಂಗಕ್ಕೆ ತಲುಪಿಸುವ ಮಾಧ್ಯಮವಾಗಿ.

5. ಕೇವಲ ಬೌದ್ಧಿಕ ಆಶಯ, ಆದರ್ಶಗಳೆಲ್ಲವೂ ಪ್ರಯೋಗಾರ್ಹ ನಿಜವಲ್ಲವೆಂದೂ, ದುಡುಕಿನಿಂದ ಅಂಥ ಮಾರ್ಪಾಡಿಗೆ ಹರಿಯುವುದರಿಂದ ಆಗಬಹುದಾದ ಹಾನಿ ; ಆದ್ದರಿಂದಲೇ ಏನನ್ನೇ ಮಾಡುವುದರಲ್ಲೂ ವಿವಿಧ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಗಮನಿಸಬೇಕಾದ ಮನುಷ್ಯನ ಮತ್ತು ಸಮಾಜದ ಮತ್ತು ಪ್ರಕೃತಿಯ

ಅನುಲ್ಲಂಘನೀಯ ಮಿತಿಗಳನ್ನು ವ್ಯಕ್ತಿಗಳಿಗೂ—ಸಮಾಜದ ಇತರ ಸದಸ್ಯರಿಗೂ ತಿಳಿಸುವ ಮಾಧ್ಯಮವಾಗಿ.

6. ಎಲ್ಲಾ ಕಾಲಕ್ಕೂ ಎಲ್ಲಾ ಸಂದರ್ಭಗಳಲ್ಲಿಯೂ ಬದಲಾಗದ ಮಾನವೀಯ ಮನೋಧರ್ಮದ ಸಾರ್ವಕಾಲಿಕ ಲಕ್ಷಣಗಳು ; ಒಂದು ಜೀವವಾಗಿ ಮನುಷ್ಯ ಮನಸ್ಸಿನ ಸತ್ಯಗಳನ್ನು ಎಲ್ಲಾ ಹಿರಿ ಕಿರಿಯ ವಿವಿಧ ಅಭಿರುಚಿಯ ಸದಸ್ಯರಿಗೆ ಸಂಘಟನೆಗಳಿಗೆ ತಿಳಿಸುವ ಮಾಧ್ಯಮವಾಗಿ.

7. ಸದಭಿರುಚಿಯನ್ನು ಬೆಳಸುವ ಮಾಧ್ಯಮವಾಗಿ.

ಚಿತ್ರಕಲೆ, ಶಿಲ್ಪಕಲೆಗಳು ಮತ್ತು ಸಂಗೀತದಂಥ ಕೇವಲ ದೃಶ್ಯ ಮತ್ತು ಶ್ರಾವ್ಯ ಮಾಧ್ಯಮಗಳ ಅರ್ಥವಂತಿಕೆಯನ್ನು ವಿವೇಚಿಸುವುದು, ವಿಮರ್ಶಿಸುವುದು, ಅರ್ಥ ಮಾಡಿಕೊಳ್ಳುವುದು ಭಾಷಾ ಸಾಹಿತ್ಯದ ಮುಖಾಂತರವೇ ಸ್ಥಾಪಿತವಾದ ಮೌಲ್ಯಗಳ ಹಿನ್ನೆಲೆಯಲ್ಲೇ ಎಂಬುದನ್ನು ಗಮನಿಸಬೇಕು. ಉಳಿದ ಸಿನಿಮಾ, ನಾಟಕ, ನೃತ್ಯ, ಸಂಗೀತ, ಪತ್ರಿಕೆ, ಆಕಾಶವಾಣಿ, ದೂರದರ್ಶನ, ಧ್ವನಿಮುದ್ರಣಗಳು ಮತ್ತು ಜಾನಪದೀಯವಾದ ಯಾವುದೇ ಅಭಿವ್ಯಕ್ತಿ ವಿಧಾನಗಳು ಭಾಷಾ ಸಾಹಿತ್ಯವನ್ನು ಬಿಟ್ಟು ಬೆಳೆಯಲಾರವು. ಒಂದು ಅರ್ಥಪೂರ್ಣ ಸಾಂಸ್ಕೃತಿಕ ಅಗತ್ಯವಾಗಿ ಉಳಿಯಲಾರವು ಎಂಬುದು ಎಲ್ಲರೂ ತಿಳಿದಿರುವ ಸತ್ಯ.

ಇಡೀ ಸಂಸ್ಕೃತಿಯೇ ಸಂಸ್ಕಾರವನ್ನು ಉದ್ದೇಶಿಸಿದ ಸಂವಹನ ಮಾಧ್ಯಮವಾಗಿದ್ದು, ಆ ಸಂಸ್ಕೃತಿ ತಾನು ಅಭಿವ್ಯಕ್ತಗೊಳ್ಳುವ ಎಲ್ಲಾ ರೀತಿಯ (ಮೇಲೆ ಪ್ರಸ್ತಾಪಿಸಲಾದ) ಅಂಗಗಳ ಮುಖಾಂತರ ವ್ಯಕ್ತಿಯಿಂದ ವ್ಯಕ್ತಿಗೆ, ಮನಸ್ಸಿನಿಂದ ಮನಸ್ಸಿಗೆ, ತಲೆಮಾರಿನಿಂದ ತಲೆಮಾರಿಗೆ ಸಂವಹನಗೊಳ್ಳುತ್ತಿರುತ್ತದೆಂಬುದು ಬಹುಶಃ ಚಿಂತನಶೀಲರಿಗೆಲ್ಲ ತಿಳಿದ ಅಂಶ. ಈ ಎಲ್ಲವನ್ನು ಎಲ್ಲರೊಡನೆ ಸಂಪರ್ಕಿಸುವ, ಅಂತಿಮವಾಗಿ ಇಡೀ ಸಾಂಸ್ಕೃತಿಕ ಪ್ರಕ್ರಿಯೆಯನ್ನು ವ್ಯಾಖ್ಯಾನಿಸುವ ಬಾಯಾಗಿ ಭಾಷಾ ಸಾಹಿತ್ಯ ಬಳಕೆಯಾಗುತ್ತದೆ. ಅಷ್ಟೇ ಏಕೆ ತನ್ನನ್ನೇ ತಾನು ಪರಿಷ್ಕರಿಸಿಕೊಳ್ಳುವುದಕ್ಕೂ, ವಿಮರ್ಶಿಸಿಕೊಳ್ಳುವುದಕ್ಕೂ ತನಗೇ ತಾನು ವೇದಿಕೆಯಾಗುತ್ತದೆ.

ಈ ಕಾರ್ಯಗಳನ್ನು ಮಾಡುವಲ್ಲಿ ನಮ್ಮ ಪೂರ್ವಿಕರೇ ಹೇಳಿದಂತೆ ಮುಖ್ಯವಾಗಿ ಪ್ರಭು ಸಂಮಿತ, ಮಿತ್ರ ಸಂಮಿತ, ಮತ್ತು ಕಾಂತಾ ಸಂಮಿತವಾಗಿ ಕೆಲಸ ಮಾಡುತ್ತದೆ. ಆದರಲ್ಲಿಯೂ ಮಾನವ ಮನಸ್ಸಿನ ಕೋಮಲ ಮೂಲಾಂಶಗಳನ್ನು ವಿನಾಶಕಾರಿ ಕ್ರೂರ ಕ್ರಮಗಳಿಂದ ಪಳಗಿಸಲೆತ್ನಿಸದೆ, ಕೋಮಲಾಂಗಿಯ ಪ್ರೇಮಮಯ ಮೃದು ಮಡಿಲಲ್ಲಿ ಕರಗಿಹೋಗುವ ಆದ್ರ್ರತೆಯ ಗಳಿಗೆಯಲ್ಲಿ ಪಿಸುಮಾತಿನ ಗುಟ್ಟು ಹೇಳಿ ಒಪ್ಪಿಸುವ ರೀತಿಯ ಕಾಂತಾ ಸಂಮಿತ ಮಾರ್ಗದಿಂದ ಉದ್ದೇಶ ಸಾಧಿಸುವುದು ಸುಲಭ ಮತ್ತು ಕ್ಷೇಮ. ಹೀಗೆ ಕಲೆಯಾಗುವ ಪ್ರಕ್ರಿಯೆ ಮನರಂಜನೆಯನ್ನು ಮಾತ್ರವಲ್ಲ ಬದುಕಿನ ನಿಷ್ಠುರತೆ, ವ್ಯಕ್ತಿಯ ನಶ್ವರತ್ವ ಏಕಾಕಿತನಗಳನ್ನು ಮರೆಸಿ

ಸಹ್ಯತೆ ಆಪೇಕ್ಷಣೀಯಂತೆಯಿಂದ ಸಾಂಸ್ಕೃತಿಕ ಆಗುವಿಕೆಯಲ್ಲಿ ಭಾಗವಹಿಸಲು ಪ್ರೇರಣೆ ನೀಡುವ ಸಾಹಿತ್ಯ ಆನಂದದಾಯಿಯಾಗಿಯೂ ಆಗುವುದರಿಂದ ನಾನಾ ಮಟ್ಟಗಳಲ್ಲಿ ಮನುಷ್ಯನಿಗೆ ಅದು ಅನಿವಾರ್ಯವಾಗುತ್ತದೆ.

ಮೇಲಿನ ನನ್ನ ಆಲೋಚನೆಗಳೆಲ್ಲವಕ್ಕೂ ಒಂದೊಂದೇ ಉದಾಹರಣೆಯನ್ನು ಕೊಡುತ್ತಾ ಹೋದರೂ, ಈ ಪ್ರಬಂಧ ಅಸಹನೀಯವಾಗಿ ಬೆಳೆಯುವ ಭಯದಿಂದ ನಿಯಂತ್ರಣಗೊಳಿಸಿಕೊಂಡಿದ್ದೇನೆ.

ಸಾಹಿತ್ಯವನ್ನು ಜನರಿಗೆ ತಿಳಿಸಬೇಕಾದ್ದನ್ನು ಪರಿಣಾಮಕಾರಿಯಾಗಿ ತಿಳಿಸಲು ಮಾಧ್ಯಮವಾಗಿ ಬಳಸಿದಾಗ ಹೇಗಿರುತ್ತದೆ ಎಂಬುದಕ್ಕೆ ಒಂದು ಉದಾಹರಣೆಯನ್ನು ಕೊಡಲಿಚ್ಛಿಸುತ್ತೇನೆ.

ಕಾವ್ಯದಂಥ ಸೂಕ್ಷ್ಮ ಮತ್ತು ಪರಿಶೋಧಿತ ಮನಸ್ಸನ್ನು ನಿರೀಕ್ಷಿಸುವಂಥ ಸಾಹಿತ್ಯ ಪ್ರಕಾರವನ್ನು ಕೂಡ ಜಾಹಿರಾತಿಗಾಗಿ ಬಳಸಿಕೊಂಡ ಈ ಪರಿಯನ್ನು ನೋಡಿ.

ಕಾಫಿಯನ್ನು ಪ್ರಸಿದ್ಧ ಪಡಿಸಲು ಕಾಫೀ ಬೋರ್ಡ್-ವಿಧಾನವೀಧಿ, ಬೆಂಗಳೂರು ಇವರು ಕೊಟ್ಟ ಜಾಹಿರಾತು ಪದ್ಯರೂಪದಲ್ಲಿದೆ.

**ಕಾಫಿ—ಸರಸ**

ಮಡದಿ ತಂದಿಟ್ಟ ಕಾಫಿ ಗುಟುಕಿನ
ಬೆಲೆ ;
ಋಷಿ ವಿಶ್ವಾಮಿತ್ರನಿಗೆ ಹರಿಶ್ಚಂದ್ರ
ತೆತ್ತಬೇಕಾದ್ದಷ್ಟೆ ?
ಒಮ್ಮೆ ಹೀರಿದರೆ ಸಾಕು ಆರಾಮ
ಒಂದೆರಡು ತಾಸು
ತುಂಬು ಬಟ್ಟಲ ಕಾಫಿ ಹಿಂದೆ
ಬೆಟ್ಟದಿಳಿಜಾರು
ಬಿಳಿಮೋಡಧರೆಗಿಳಿದ ಹಾಗೆ
ಎಲ್ಲೆಲ್ಲು ಹೂವು
ಹೂ ಕಾಯದಾಗ ಅದರ
ಪರಿಯೇ ಬೇರೆ
ಲಕ್ಷ ಕೈಗಳ ದಾಟಿ ಪಡೆದ ರೂಪ
ಬೇರೆ
ಈ ರೂಪಕ್ಕೆ ದುಡಿದ ಮನೆ ಮನೆಯಲಿ
ನಿನ್ನದೇ ಹಣತೆ

ಮಡದಿ
ನೀ ಕೊಟ್ಟ ಕಾಫಿ ಗುಟಕರಿಸಿ
ಬರೆದಿರುವೆ ಈ ಕವಿತೆ

ಕಲ್ಪನಾಕತೆಯ ಸೊಬಗು ಅಭಿವ್ಯಕ್ತಿ ಚಾತುರ್ಯದ ಕಾವ್ಯಗಂಧಿ ಸಾಲುಗಳು ಬೇಕಾದಷ್ಟು ಜಾಹಿರಾತು ಪ್ರಪಂಚದಲ್ಲಿ ಕಣ್ಣಿಗೆ ಬೀಳುತ್ತವೆ. 'Quickfix' ನ ಜಾಹಿರಾತು ಇದು 'Joins everyting except broken heart'...ಆಸ್ಟ್ರೇಲಿಯಾ ದ ವೇಗದ ಬೋಲರ್ ಅತ್ಯುತ್ತಮ ಲೆಂಗ್ತ್‌ನಿಂದ ಬೋಲ್ ಮಾಡುತ್ತಿದ್ದಾನೆಂದರೆ ಸಾಲದು 'Me. Dirmotl ; hitting the golden length' ಎನ್ನಬೇಕು, ಲೆಂಡ್ಲ್ ಯಾವುದೋ ಟೆನಿಸ್ ಪ್ರಶಸ್ತಿ ಗೆದ್ದು ಛಾಂಪಿಯನ್ ಆದ ಎಂದರೆ ಸಾಲದು 'Lendl, Lord of the garden' ಎನ್ನಬೇಕು. world series cup ನ ರೋಮಾಂಚಕ ಅನುಭವಗಳನ್ನು ನೂರಾರು ಸಾಲುಗಳಲ್ಲಿ ಹೇಳುವುದು ಹೇಗಿರುತ್ತದೆ? ಅದನ್ನು 'world series cup thrills and spills' ಎಂದರೆ ಹೇಗೆ ? (Sports Star, Feb 8th 1986).

ಸಾಹಿತ್ಯ ಒಂದು ಜನಪರ ಮಾಧ್ಯಮವಾಗಿ ಹೀಗೆಲ್ಲ ಕೆಲಸ ಮಾಡಬಲ್ಲುದಾದ್ದ ರಿಂದ ಪ್ರಸ್ತುತ ಸಂದರ್ಭದಲ್ಲಿಯೂ ಧಾರ್ಮಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಮುಂತಾದ ಕ್ಷೇತ್ರಗಳಲ್ಲಿ ಆದುದನ್ನು ಆಗಬೇಕಾದುದನ್ನು ತನ್ನ ಒಡಲಿನಲ್ಲಿ ಹೊತ್ತು ಕೊಂಡು ಹೋಗಬೇಕಾಗಿದೆ, ಶುಷ್ಕ ನಾಗರಿಕತೆಯ ಮೋಹದ ಹುದುಲೊಳಗೆ ಕುಸಿದು, ಸ್ವಾರ್ಥ ಲಾಲಸೆ ಕಾಮ ಕ್ರೋಧಾದಿಗಳ ಸ್ವಚ್ಛಂದತೆಯೇ ತನ್ನ ಜೀವನದ ಆತ್ಯಂತಿಕ ಗುರಿ ಎಂದು ಭ್ರಮಿಸಿರುವಂತೆ ತೋರುವ ಆಧುನಿಕ ಮಾನವನ ಬದುಕು ಭಯಾನಕ ನಿರರ್ಥಕತೆಯಲ್ಲಿ ವಿಲಿವಿಲಿಗುಡುತ್ತಿರುವ ಚಿತ್ರವನ್ನು ತಾನೂ ತೋರಿಸು ವುದರ ಜೊತೆಗೆ ನಿಜವಾಗಿ ಬದುಕುವ ಸಾಮಾಜಿಕವಾಗಿ ಬೆಳೆಯುವ, ಉಳಿಯುವ ಕೆಲಸವನ್ನು ಸಾಹಿತ್ಯ ಮಾಡಬೇಕಾಗಿದೆ. ಹಳೆಯ ಕೊಳಕು ಕೊಳದಲ್ಲೇ ಮಿಂದು ಆನಂದಿಸುವ ವಿಕೃತರತಿಯಿಂದ ಹೊರಬಂದು, ಹೊಸಬಾಳಿನ ಲಲಿತ ಮಾರ್ಗವನ್ನು ಶೋಧಿಸುವ ಜನಪರ ಮಾಧ್ಯಮವಾಗಿ ಸಾಹಿತ್ಯ ಕೆಲಸ ಮಾಡಬೇಕು. ತನ್ಮೂಲಕ ತನ್ನ ಸಂಪರ್ಕಕ್ಕೆ ಬರುವ ಎಲ್ಲ ಸಂಸ್ಕೃತಿಯ ಮಾಧ್ಯಮಗಳಿಗೆ ಪ್ರೇರಕ ಶಕ್ತಿಯು ಆಗಬೇಕು ಎಂಬುದರಲ್ಲಿ ಸಂಶಯವಿಲ್ಲ.

ಸೌಂದರ್ಯದೇಹಿಯಾದ ಸಾಹಿತ್ಯದ ಸಂಪರ್ಕವೇ ಜನರನ್ನು ಸೌಂದರ್ಯಾಭಿರುಚಿ ಗಳನ್ನಾಗಿ ಮಾಡಿ ತನ್ಮೂಲಕ ಜೀವನ ಸೌಂದರ್ಯವನ್ನು ಬಯಸುವ ಪ್ರವೃತ್ತಿಯನ್ನು ಬೆಳೆಸುತ್ತದೆ.

ಕೊನೆಯದಾಗಿ ಸಾಹಿತ್ಯ ತನ್ನೊಟ್ಟಿಗೆ ಇಡೀ ಸಮಾಜವನ್ನು ಕರೆದುಕೊಂಡು ಹೇಗೆ ಜನಪರವಾಗಿ ಕೆಲಸ ಮಾಡಬಹುದು ಎಂಬುದಕ್ಕೆ ಒಂದು ಉದಾಹರಣೆಯನ್ನು ಮಾದರಿಯಾಗಿ ಹೇಳಿಬಿಡುತ್ತೇನೆ,

ಪಟ್ಟಭದ್ರ ಹಿತಾಸಕ್ತಿಗಳ ನಡುಮುರಿದು ಮಣ್ಣಿನ ಮಗನ ಮನವನ್ನು ಅರಳಿಸಿದ 12ನೇ ಶತಮಾನದ ವಚನ ಚಳುವಳಿಯು, ಸಾಹಿತ್ಯವು ಹೀಗೆ ಮಾಡಬಹುದಾದ ಕಾರ್ಯವನ್ನು ಅತ್ಯಂತ ಸಮಗ್ರವಾಗಿ ಮಾಡಿದ್ದಕ್ಕೆ ಉತ್ತಮ ಉದಾಹರಣೆ ಎಂದು ಕೊಂಡಿದ್ದೇನೆ. ಅನಂತರದ ದಾಸ ಸಾಹಿತ್ಯವೂ ಇಂಥ ಪರಂಪರೆಯನ್ನು ಮುಂದುವರೆಸಿರುವುದನ್ನು ಕಾಣಬಹುದಾದರೂ ಅದು ಅಂತಿಮವಾಗಿ, ವಚನಕಾಲದ-ಕ್ರಾಂತಿಯಂತೆ ವ್ಯವಸ್ಥೆಯ ಎಲ್ಲ ಅಂಗಗಳನ್ನೂ ಬೇರುಸಹಿತ ಅಲ್ಲಾಡಿಸುವ ಸಮಗ್ರತೆಯನ್ನು ಪಡೆಯದೆ ಕೆಲವು ವ್ಯಕ್ತಿಗಳಲ್ಲಿ ಹೆಚ್ಚೆಂದರೆ ಗುಂಪುಗಳಲ್ಲಿ ಕೊನೆಗೊಂಡಂತೆ ತೋರುತ್ತದೆ.

ಈಗ ಕಾಡುತ್ತಿರುವ ಜಾತೀಯತೆ, ಭ್ರಷ್ಟಚಾರ, ಸ್ವಜನ ಪಕ್ಷಪಾತ–ಗೊಸುಂಬಿತನ, ಲೋಲುಪತೆ, ಹುಸಿಪ್ರತಿಷ್ಠೆ, ಹಿಂಸಾರತಿ ಮುಂತಾದ ಪಿಶಾಚಿಗಳಿಂದ ಬಿಡುಗಡೆ ಹೊಂದಲು 12ನೇ ಶತಮಾನದ ಆಸತ್ಪ್ರೋದ್ರೇಕ ಮತ್ತೆ ಆಗಲಿ ಎಂದು ಆಶಿಸಿ, ಈಗ ಅಂಥ ಪ್ರಯತ್ನಕ್ಕೆ ತೊಡಗುತ್ತಿರುವ ವ್ಯಕ್ತಿ ಮತ್ತು ಪಂಥಗಳಿಗೆ ಯಶಸ್ಸು ಸಿಗಲಿ ಎಂದು ಹಾರೈಸಬೇಕಾಗಿದೆ.

---

# ‘ಹೊಸ ದಿಗಂತದ ಕಡೆಗೆ’ : ಕರ್ವಾಲೋ

ಜಿ. ಪಿ. ಬಸವರಾಜು

೧

ನವ್ಯ ಮಾರ್ಗದಲ್ಲಿ ತಮ್ಮ ಬರವಣಿಗೆಯನ್ನು ಆರಂಭಿಸಿದ ಪೂರ್ಣಚಂದ್ರ ತೇಜಸ್ವಿ ಅವರು ಆ ಮಾರ್ಗವನ್ನು ಧಿಕ್ಕರಿಸುವ ನಿರ್ಧಾರ ಕೈಗೊಂಡದ್ದು 1973ರಲ್ಲಿ. ಆಗ ತಾವು ಪ್ರಕಟಿಸಿದ ‘ಅಬಚೂರಿನ ಪೋಸ್ಟಾಫೀಸು’ ಕಥಾ ಸಂಕಲನದಲ್ಲಿ ತೇಜಸ್ವಿ ಹೊಸ ಮಾರ್ಗವೊಂದನ್ನು ಅನ್ವೇಷಿಸಬೇಕಾಗಿರುವ ಅನಿವಾರ್ಯತೆಯನ್ನು ವಿವರಿಸಿದ್ದಾರೆ. (ಮುನ್ನುಡಿ– ‘ಹೊಸ ದಿಗಂತದ ಕಡೆಗೆ’) ನವ್ಯ ಸಾಹಿತ್ಯ ಸಂಪ್ರದಾಯವನ್ನು ತ್ಯಜಿಸಬೇಕಾಗಿರುವುದಕ್ಕೆ ತೇಜಸ್ವಿ ಮೂರು ಕಾರಣಗಳನ್ನು ಕೊಡುತ್ತಾರೆ. ಮೊದಲನೆಯ ಕಾರಣ ನವ್ಯ ಮಾರ್ಗದ ಸಾಂಕೇತಿಕ ಶೈಲಿ ಮತ್ತು ತಂತ್ರಗಳು ; ಎರಡನೆಯದು ಉಪಾಧ್ಯಾಯರಿಂದಲೇ ಆಗುವ ಸಾಹಿತ್ಯ ಸೃಷ್ಟಿ ; ಮೂರನೆಯದು ಕೇವಲ ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡ ಕ್ರಾಂತಿಕಾರತನ.

ಇಷ್ಟು ವರ್ಷಗಳ ನಂತರ, ಅಂದರೆ ನವ್ಯ ಸಾಹಿತ್ಯ ಮಾರ್ಗ ಕೊನೆಯ ಘಟ್ಟವನ್ನು ತಲುಪಿ ಹೊಸದೊಂದು ಮಾರ್ಗ ಆವಿಷ್ಕಾರಗೊಳ್ಳುತ್ತಿರುವ ಈ ಸಂಕ್ರಮಣ ಸ್ಥಿತಿಯಲ್ಲಿ ತೇಜಸ್ವಿಯವರ ಕಾರಣಗಳು ನಮಗೆ ಹೆಚ್ಚು ಸ್ಪಷ್ಟವಾಗುತ್ತವೆ ; ಒಪ್ಪಿತವಾಗುತ್ತವೆ. ನವ್ಯ ಮಾರ್ಗದ ಅನೇಕ ಸಾಹಿತ್ಯ ಕೃತಿಗಳು ಓದುಗ ವಲಯವನ್ನು ಸಂಕುಚಿತಗೊಳಿಸಿದ್ದಕ್ಕೆ ಬೇರೆ ಕಾರಣಗಳು ಇವೆಯಾದರೂ ಮುಖ್ಯ ಕಾರಣ ಈ ಸಾಂಕೇತಿಕ ಶೈಲಿ ಮತ್ತು ತಂತ್ರಗಳು ಎಂಬುದನ್ನು ಒಪ್ಪಿಕೊಳ್ಳಲು ಇವತ್ತು ಹೆಚ್ಚಿನ ಚರ್ಚೆ ಬೇಡ ಎನಿಸುತ್ತದೆ. ಕೇವಲ ಅಧ್ಯಾಪಕರು ಮಾತ್ರ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿ, ಸಾಹಿತ್ಯ ಸೃಷ್ಟಿಯನ್ನು ತಮ್ಮ ಕುಲ ಕಸುಬಿನಂತೆ ಮಾಡಿಕೊಳ್ಳುತ್ತಿದ್ದಾರೆಂದು ತೇಜಸ್ವಿ ರೇಗಿದ್ದು, ‘ಕೇವಲ ಒಂದು ವರ್ಗದ ಜನ ಮಾತ್ರ ತೊಡಗಿದ ಸಾಹಿತ್ಯ ಕೃತಿಗಳು ಏಕತಾನದಿಂದ ಓದುಗರನ್ನು ಕಳೆದುಕೊಳ್ಳುತ್ತವೆ’ ಎನ್ನುವ ಕಾರಣದ ಜೊತೆಗೆ ‘ಸಾಹಿತ್ಯ ಇಡಿಯ ಒಂದು ಭಾಷಾ ಸಮುದಾಯದ ಅಭಿವ್ಯಕ್ತಿಯಾಗಿ ವೈವಿಧ್ಯತೆಯನ್ನು, ಸಮೃದ್ಧಿಯನ್ನು ಪಡೆದುಕೊಳ್ಳಬೇಕು’ ಎನ್ನುವ ಕಾಳಜಿಯನ್ನೂ ಹೊಂದಿದ ಕಾರಣದಿಂದ. ಅವರು ನೀಡಿವ ಮೂರನೆಯ ಕಾರಣ– ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡ ಕ್ರಾಂತಿಕಾರತನ–ಹೇಗೆ ಭಾಷೆ, ಜಾತಿ ಪದ್ಧತಿ, ತತ್ವ ಚಿಂತನೆ, ರಾಜಕೀಯ ಆಂದೋಲನ ಮುಂತಾದ ಉಳಿದ ಕ್ಷೇತ್ರಗಳಿಗೂ ಹಬ್ಬದೆ ಹೋಗುತ್ತದೆ ಎಂಬ ಹಿನ್ನೆಲೆಯಲ್ಲಿ.

ಹೀಗೆ ಒಂದು ಮಾರ್ಗದ ಶ್ರೇಷ್ಠ ಗುಣಗಳನ್ನು ಅರಗಿಸಿಕೊಂಡು, ಕುಬ್ಜ ಘಟ್ಟಗಳನ್ನು ಗುರುತಿಸಿ ಬೇರೊಂದು ಹೊಸ ಮಾರ್ಗದ ಅನ್ವೇಷಣೆಯಲ್ಲಿ ಹೊರಟ ತೇಜಸ್ವಿ ಆ ನಂತರ ಸೃಷ್ಟಿಸಿದ ಕೃತಿಗಳು– 'ಅಬಚೂರಿನ ಪೋಸ್ಟಾಫೀಸು', 'ನಿಗೂಢ ಮನುಷ್ಯರು' 'ಕರ್ವಾಲೋ' ಮತ್ತು 'ಚಿದಂಬರ ರಹಸ್ಯ'.

'ಅಬಚೂರಿನ' ಎಲ್ಲ ಕಥೆಗಳಲ್ಲೂ ಈ ಪ್ರಯತ್ನ ಕಂಡುಬರುತ್ತದೆಯಾದರೂ ತೇಜಸ್ವಿ ಅಲ್ಲೆಲ್ಲ ಯಶಸ್ವಿಯಾಗಿದ್ದಾರೆ ಎಂದು ಹೇಳಲು ಬರುವುದಿಲ್ಲ. ಒಂದು ಮಾರ್ಗವನ್ನು ತೊರೆಯುವ ಚಡಪಡಿಕೆ, ಮತ್ತೊಂದು ಮಾರ್ಗವನ್ನು ಒಲಿಸಿಕೊಳ್ಳ ಬೇಕಾದ ಹಂಬಲ ಈ ಕಥೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಈ ಸಂಕಲನದ ಯಶಸ್ವಿ ಕಥೆಗಳಲ್ಲಿ ಒಂದಾದ 'ಅವನತಿ'ಯಲ್ಲಿ ತೇಜಸ್ವಿ ನವ್ಯ ಮಾರ್ಗವನ್ನು ಎಷ್ಟು ತೊರೆದಿದ್ದಾರೆ ಎಂಬುದು ಚರ್ಚೆಗೆ ವಸ್ತುವಾಗಬಲ್ಲದು. ಆದರೆ ಮತ್ತೊಂದು ಯಶಸ್ವಿ ಕಥೆಯಾದ 'ತಬರನ ಕಥೆ'ಯಲ್ಲಿ ತೇಜಸ್ವಿ ಹೊಸ ಮಾರ್ಗವೊಂದರ ಅನ್ವೇಷಣೆಯಲ್ಲಿರುವುದರ ನಿಖರ ಸೂಚನೆಗಳಿವೆ.

'ನಿಗೂಢ ಮನುಷ್ಯರು' ಕೃತಿಯಲ್ಲಿ ಮತ್ತೆ ನವ್ಯದ ತಾಕಲಾಟಗಳನ್ನೇ ಕಾಣುತ್ತೇವೆ. ಹಳ್ಳಿಗಾಡಿನ, ಕಾಡು–ಮೇಡಿನ ಅನುಭವವನ್ನು ಅರಸಿ ಬರುವ ನಗರ ಪ್ರದೇಶದವನ ಹಳಹಳಿಕೆ ನವ್ಯದ ನೆರಳಿನಂತೆಯೇ ಕಾಣುತ್ತದೆ. ಆತನ ಮೂಲಕ ಕಗ್ಗಾಡಿನಲ್ಲಿ ಬದುಕುವವರ ಬದುಕನ್ನು ಸಮರ್ಥವಾಗಿ ಚಿತ್ರಿಸಲು ತೇಜಸ್ವಿ ಯತ್ನಿಸಿದರೂ, ಅದು ಆ ಮಣ್ಣಿನಲ್ಲಿಯೇ ಬೇರು ಬಿಟ್ಟವನ ಅನುಭವವಾಗುವುದಿಲ್ಲ. ಜಡಿಯುವ ಮಳೆ, ಭೂತಾಕಾರದ ಬೆಟ್ಟಗಳು, ಜರಿಯುವ ಗಿರಿ ಇವುಗಳ ನಿಗೂಢ ಪರಿಸರ ನಮ್ಮನ್ನು ಆಕ್ರಮಿಸಿ ಬಿಡುವಂತೆ ಈ ಕಾದಂಬರಿಯ ಉಳಿದ ಪಾತ್ರಗಳು ಆಕ್ರಮಿಸುವುದಿಲ್ಲ.

ಈ ಬೆಳವಣಿಗೆಯ ಘಟ್ಟಗಳನ್ನು ಗಮನಿಸಿದಾಗ 'ಕರ್ವಾಲೋ'ದ ಮಹತ್ವ ನಮಗೆ ಅರ್ಥವಾಗುತ್ತದೆ. ನವ್ಯದ ಸಿಕ್ಕುಗಳನ್ನು ಬಿಡಿಸಿಕೊಳ್ಳುವಲ್ಲಿ, ನವ್ಯದ ಮಿತಿಗಳನ್ನು ಮೀರುವಲ್ಲಿ ತೇಜಸ್ವಿ ಯಶಸ್ವಿಯಾಗಿರುವುದು ಈ ಕೃತಿಯಲ್ಲಿಯೇ. ಇಲ್ಲಿ ಅನುಭವದ ತಾಜಾತನವಿದೆ. ಬದುಕಿನ ವಿವಿಧ ಕ್ಷೇತ್ರಗಳು ಸಮರ್ಥ ಅಭಿವ್ಯಕ್ತಿಯಲ್ಲಿ ರಾರಾಜಿಸುವುದನ್ನೂ ಇಲ್ಲಿ ಕಾಣಬಹುದು. ವಿಜ್ಞಾನ, ಕೃಷಿ, ಜೇನು ಸಾಕಣೆ, ಕಾಡಿನ ಒಳ ವಲಯಗಳು ಅಭಿವ್ಯಕ್ತಿಯ ಸಾಣೆಗೆ ಸಿಕ್ಕಿ ಹೊಳೆಯತೊಡಗುತ್ತವೆ. ಇಷ್ಟು ಮಾತ್ರವಲ್ಲದೆ 'ಲೋಹಿಯಾರವರ ತತ್ವ ಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನಲ್ಲಿನ ಪ್ರಯೋಗಶೀಲತೆ ('ಹೊಸ ದಿಗಂತದ ಕಡೆಗೆ'– ಅಬಚೂರಿನ ಮುನ್ನುಡಿ) ತೇಜಸ್ವಿ ಅವರ ಮೇಲೆ ಬೀರಿರುವ ಗಾಢ ಪರಿಣಾಮವನ್ನೂ ಈ ಕೃತಿ ತೋರಿಸಿಕೊಡುತ್ತದೆ.

ಹೀಗೆ ವಿವಿಧ ಬೆಳವಣಿಗೆಗಳ ಹಂತದಲ್ಲಿ, ಅನೇಕರ ಪ್ರಭಾವಗಳನ್ನು ಅರಗಿಸಿ

ಕೊಂಡ ದೃಷ್ಟಿಯಲ್ಲಿ, ಯಶಸ್ವೀ ಅಭಿವ್ಯಕ್ತಿಯ ಕೃತಿಯಾಗಿ 'ಕರ್ವಾಲೋ' ತೇಜಸ್ವಿಯವರ ಸೃಜನಶೀಲ ಬರವಣಿಗೆಗಳಲ್ಲಿ ಗಮನಾರ್ಹ ಸ್ಥಾನ ಪಡೆದುಕೊಳ್ಳುತ್ತದೆ.

೨

'ಕರ್ವಾಲೋ' ಕಾದಂಬರಿಯ ಒಂದು ತುದಿ ವಿಜ್ಞಾನವಾದರೆ ಇನ್ನೊಂದು ತುದಿ ಪ್ರಕೃತಿ. 21ನೇ ಶತಮಾನಕ್ಕೆ ಕಾಲಿರಿಸುತ್ತಿರುವ ಮನುಷ್ಯನ ಮಹತ್ತರ ವೈಜ್ಞಾನಿಕ ಸಾಧನೆಯ ತುತ್ತ ತುದಿಯ ಘಟ್ಟದಿಂದ ಆರಂಭವಾಗುವ ಈ ಕಾದಂಬರಿ ಬಂದು ನಿಲ್ಲುವುದು ಈ ಸಾಧನೆಯ ಅಲ್ಪತೆಯನ್ನು ತೋರಿಸುವ ಹಂತದಲ್ಲಿ. ನಾಗರಿಕ ಬದುಕಿನ ಧಾವಂತದಲ್ಲಿ ತೀರ ಕ್ಷುಲ್ಲಕ ವಸ್ತು ಎನ್ನುವಂತೆ ಉಪೇಕ್ಷೆಗೆ, ಅವಜ್ಞೆಗೆ ಒಳಗಾಗಿರುವ ಪ್ರಕೃತಿ ಕಾದಂಬರಿ ಬೆಳೆದಂತೆ ತನ್ನ ನಿಗೂಢತೆಯ ಸ್ವರೂಪವನ್ನು ಎಳೆಎಳೆಯಾಗಿ ಬಿಚ್ಚುತ್ತ ನಿಗೂಢವೇ ಆಗಿ ಉಳಿಯುವುದು, ಅದ್ಭುತಗಳನ್ನು ತೋರುತ್ತಲೇ ವಿಸ್ಮಯವಾಗಿ ಉಳಿಯುವುದು. ಕೈಗೆಟಕಿದಷ್ಟು ಹತ್ತಿರ ಬಂದಂತೆ ಮಾಡಿ ದೂರವೇ ಉಳಿದುಬಿಡುವುದು, ಮನುಷ್ಯನ ಅಹಂಕಾರಕ್ಕೆ ಸವಾಲಾಗುವುದು, ಈ ಕೃತಿಯ ವಿಶೇಷ.

ಈ ವಿಜ್ಞಾನ–ಪ್ರಕೃತಿಗಳ ಎರಡು ತುದಿಗಳ ನಡುವೆ ಕಾದಂಬರಿಯ ಪಾತ್ರಗಳು ಬಂದು ಹೋಗುತ್ತವೆ ; ಅವುಗಳ ಬದುಕು ಅಸ್ತಿತ್ವ ಪಡೆದುಕೊಳ್ಳುತ್ತದೆ. ಈ ಪಾತ್ರಗಳಲ್ಲೂ ನಮಗೆ ಎರಡು ವಿರುದ್ಧವಾದ ತುದಿಗಳೇ ಕಂಡು ಬರುತ್ತವೆ. ವಿಜ್ಞಾನಿ ಕರ್ವಾಲೋ ಒಂದು ಕೊನೆಯಾದರೆ ಮಂದಣ್ಣ ಮತ್ತೊಂದು ಕೊನೆ. ಕರ್ವಾಲೋ ಅವರ ಅಸ್ತಿತ್ವದ ಬೇರುಗಳು ವಿಜ್ಞಾನ ಕ್ಷೇತ್ರದಲ್ಲಿ ನೆಲೆ ಪಡೆದುಕೊಂಡರೆ, ಮಂದಣ್ಣನ ಅಸ್ತಿತ್ವ ಇರುವುದು ಪ್ರಕೃತಿಯಲ್ಲಿ. ವಿಜ್ಞಾನ–ಪ್ರಕೃತಿಗಳ ನಡುವಣ ಕೊಂಡಿಯಾಗಿ, ಜೀವತಂತುವಾಗಿ, ಜೀವ ವಿಕಾಸ ಪಥದ ಅವಶೇಷವಾಗಿ ಕರ್ವಾಲೊ–ಮಂದಣ್ಣರ ನಡುವಣ ಸಂವಹನ ಕ್ರಿಯೆಯಾಗಿ, ಆಸಕ್ತಿಯ ಕೇಂದ್ರವಾಗಿ ಹಾರುವ ಓತಿ ಬರುತ್ತದೆ. ಹೀಗೆ ಒಂದರೊಳಗೊಂದು ಬೆರೆಯುತ್ತ, ಇತಿಹಾಸ–ವರ್ತಮಾನ–ಭವಿಷ್ಯತ್ತುಗಳನ್ನು ಬೆಸೆಯುತ್ತ, ವಿಜ್ಞಾನ ಅಧ್ಯಾತ್ಮವಾಗುತ್ತ, ವಾಸ್ತವ ವಿಸ್ಮಯವಾಗುತ್ತ ಓದುಗನನ್ನು ಆವರಿಸಿಬಿಡುವ ಈ ಕಾದಂಬರಿ ಪ್ರಬುದ್ಧ ಚಿಂತಕನೊಬ್ಬ ತೀವ್ರ ಕಾಳಜಿಯಿಂದ ನಡಸಿದ ತತ್ವ ಜಿಜ್ಞಾಸೆಯಾಗಿದೆ ; ಜೀವಪರ ಧೋರಣೆಯ ಕಲಾಕಾರನೊಬ್ಬ ಹಿಡಿದಿಟ್ಟ ದಟ್ಟ ಜೀವನದ ವಿವರಣೆಯಾಗಿದೆ ; ವಿಸ್ಮಯಗಳ ಬೆನ್ನು ಹತ್ತಿದ ವಿಜ್ಞಾನಾಸಕ್ತನೊಬ್ಬ ಮಂಡಿಸಿದ ದಾಖಲೆಗಳ ಪುಸ್ತಕದಂತಿದೆ.

ಇಂಥ ಕೃತಿಯೊಂದು ಓದುಗನ ಸುಲಭ ಅಧ್ಯಯನಕ್ಕೆ ದಕ್ಕದ ಕೃತಿಯಾಗಬೇಕಿತ್ತು. ಆದರೆ ಈ ಎಣಿಕೆಯನ್ನು ತಲೆ ಕೆಳಗು ಮಾಡುವಂತೆ 'ಕರ್ವಾಲೋ' ತೀರ ಸರಳ ಕೃತಿಯಂತೆ ಓದಿಸಿಕೊಳ್ಳುತ್ತದೆ. ಕಾದಂಬರಿಯನ್ನು ಮೇಲ್ ಸ್ತರದಲ್ಲಷ್ಟೆ

ಗ್ರಹಿಸಬಲ್ಲ ಸಾಮಾನ್ಯ ಓದುಗನಿಗೂ ರುಚಿ ಹತ್ತಿಸುವ ಗುಣವನ್ನು ಪಡೆದುಕೊಂಡಿದೆ. ಒಂದಿಷ್ಟು ಗಡುಸು ಶೈಲಿಯ ತೇಜಸ್ವಿ ಇಲ್ಲಿ ತಿಳಿಹಾಸ್ಯದ ಸರಳ ಸಹಜ ಗತಿಯಲ್ಲಿಯೇ ಇಡೀ ಕೃತಿಯನ್ನು ನಡೆಸುತ್ತಾರೆ. ಹಳ್ಳಿಗರ ಬದುಕಿನಲ್ಲಿ ಮಾಮೂಲಿನಂತೆ ಬರುವ ಎಷ್ಟೋ ಹಾಸ್ಯ ಪ್ರಸಂಗಗಳು ಹಾಗೆಯೇ ಕಾದಂಬರಿಯಲ್ಲಿ ಪ್ರವೇಶ ಪಡೆಯುವುದರಿಂದ 'ಕರ್ವಾಲೋ' ಕೈಗೆತ್ತಿಕೊಂಡರೆ ನಗೆ ಕಟ್ಟೆಯೊಡೆದು ಧುಮ್ಮಿಕ್ಕುತ್ತದೆ. ಒಂದು ಫ್ಲ್ಯಾಷ್ ಲೈಟು ಮಂದಣ್ಣನ ಮೇರೇಜಿನ ಗದ್ದಲವನ್ನೇ ನಿಯಂತ್ರಿಸುವ ಪ್ರಸಂಗವನ್ನೇ ನೋಡಿ. ಇಲ್ಲಿ ಹಾಸ್ಯ ಎಳೆದು ತಂದ ಸರಕಲ್ಲ. ಬದುಕಿನ ಸಹಜ ಗತಿಯಲ್ಲಿ ಅರಳಿದ ಪ್ರಸಂಗವಷ್ಟೆ. ಇಡೀ ಕೃತಿಯಲ್ಲಿ ಇಂಥ ಪ್ರಸಂಗಗಳಿಗೆ ಬರವಿಲ್ಲ. ನಿರೂಪಣಾ ಶೈಲಿಯಲ್ಲೂ ಈ ಹಾಸ್ಯ ಕಂಡು ಬರುತ್ತದೆ. ಇದೇ ಈ ಕಾದಂಬರಿಯ ಅಯಾಸ್ಕಾಂತ ಶಕ್ತಿ.

೩

'ಕರ್ವಾಲೋ' ಕೃತಿಯ ಮಹತ್ವ ಇರುವುದು ಅದು ಬದುಕನ್ನು ಗ್ರಹಿಸುವ ಕ್ರಮದಲ್ಲಿ; ಅದು ಕಟ್ಟಿಕೊಡುವ ಸಣ್ಣ ಸಣ್ಣ ವಿವರಗಳಲ್ಲಿ; ಅದು ಸೃಷ್ಟಿಸುವ 'ಅಥೆಂಟಿಕ್ ಪ್ರಪಂಚ'ದಲ್ಲಿ. ಇಲ್ಲಿನ ಮಂದಣ್ಣನನ್ನು ನೋಡಿ. ಅವನ ಮಾವ ನಾರ್ವೆ ರಾಮಯ್ಯನನ್ನು ನೋಡಿ. ಅವರ ಕಳ್ಳಬಟ್ಟಿಯ ವ್ಯವಹಾರ, ಪೊಲೀಸು–ಕೋರ್ಟು–ಜೈಲು–ಲಾಯರು; ಮಂದಣ್ಣನ ಕಾಡು–ಮೇಡು, ಹುಳು–ಹುಪ್ಪಟೆ; ಬಿರ್ಯಾನಿ ಕರಿಯಪ್ಪ, ಅವನ ಅಡಿಗೆಯ ವಿದ್ಯೆ, ಶಿಕಾರಿಯ ಜಾಣ್ಮೆ, ಮರಹತ್ತುವ ಚಾಕಚಕ್ಯತೆ, ಅವನ ಗರ್ಮಿ ಸಾಮಾನುಗಳು, ಅದರ 'ಪರಿಣಾಮ'ಗಳು; ಹಾವುಗೊಲ್ಲರ ಎಂಗ್ಟ, ಹಾವನ್ನು ಹಿಡಿದು ವಿಷ ತೆಗೆಯುವ, ಚರ್ಮ ಸುಲಿಯುವ ಅವನ ವಿದ್ಯೆ, ಕಾಡು ಪ್ರಾಣಿಗಳ ಚರ್ಮ ತೆಗೆದು ಮಾರಿ ಬದುಕುವ ಅವನ ಜೀವನ ಶೈಲಿ; ಫಾರೆಸ್ಟು ಗಾರ್ಡುಗಳೊಂದಿಗೆ ವ್ಯವಹರಿಸುವ ಎಂಗ್ಟನ ಹೆಂಡತಿಯ ಜೀವನಧರ್ಮ ಮತ್ತು ನೀತಿ; ಅವರ ಕಾಡಿನ ಗಾಢ ಸಂಬಂಧ; ಕರ್ವಾಲೋ ಅವರ ಸಂಶೋಧನೆಗಳು; ಅಷ್ಟೇಕೆ ಈ ಕಾದಂಬರಿಯ ಮುಖ್ಯ ಪಾತ್ರದಂತೆ ಚಿತ್ರಿತವಾಗಿರುವ ಕಿವಿ; ಅದರ ನಡವಳಿಕೆಗಳು; ಆಹಾರ ಕ್ರಮ, ರೋಗ-ರುಜಿನಗಳು ಯಾವುದನ್ನಾದರೂ ನೋಡಿ. ಒಂದೊಂದೂ ಒಂದೊಂದು ಪ್ರಪಂಚ.

ಈ ಎಲ್ಲ ಪಾತ್ರಗಳೂ ಬದುಕಿನ ಒಂದೇ ಮೂಲದಿಂದ, ಒಂದೇ ಸ್ತರದಿಂದ ಬಂದವಲ್ಲ; ಇವುಗಳ ವರ್ಗಗಳು, ಜಾತಿಳಳು ಬೇರೆ ಬೇರೆ; ಅನುಸರಿಸುವ ರೀತಿ–ನೀತಿಗಳು, ಜೀವನ ಧರ್ಮಗಳು, ಧೋರಣೆಗಳು ಬೇರೆ ಬೇರೆ. ಕರಿಯಪ್ಪನ ತಿಳುವಳಿಕೆಗೆ ಎಟುಕುವ, ಅವನ ಸೀಮಿತ ಅರ್ಥದ ತರ್ಕಕ್ಕೆ ಸಿಕ್ಕುವ, ಅವನ ನಂಬಿಕೆಯ 'ದೇವರು' ಒಂದು ಬಗೆಯಾದರೆ, 'ಸಾಕ್ಷ್ಯಾಧಾರ ಇಲ್ಲದ ಯಾವುದನ್ನೂ ನಂಬೋದಿಲ್ಲ. ದೇವರನ್ನು ನಂಬೋದು, ಬಿಡೋದು ಎಲ್ಲಾ ನಿರುಪಯುಕ್ತ ಚರ್ಚೆ'

ಎನ್ನುವ ಕರ್ವಾಲೋ ಅವರ ತಿಳುವಳಿಕೆ, ನಂಬಿಕೆಗಳೇ ಇನ್ನೊಂದು ರೀತಿಯವು. ಕರಿಯಪ್ಪನ ತರ್ಕ ಸುಲಭಗ್ರಾಹ್ಯವಾದದ್ದೆ ? –'ಅಲ್ರಯ್ಯಾ, ದೇವ್ರಿಲ್ಲಾಂತಾದರೆ ಇಷ್ಟೊಂದು ಇಚಿತ್ರ ಯಾಕಿರಬೇಕಿತ್ತು, ನೂರೆಂಟು ತರ ಹಕ್ಕಿ ಹುಳ ಹುಪ್ಪಟೆ. ಮೈಲುಗಟ್ಟಲೆ ಹೋಗಿದ್ದ ಜೇನು ವಾಪಸ್ ಗೂಡಿಗೇ ಬರ್ತದಲ್ಲಾ ! ಕಡ್ಡಿ ಹುಳ ಕಡ್ಡಿಗಳ ಮಧ್ಯೆ ಇರೋದು ! ಎಲೆ ಹುಳು ಎಲೆ ಮಧ್ಯೆ ಕೂರೋದು. ಗೋಸುಂಬೆ ಬಣ್ಣ ಬದಲಿಸಿ ಕಣ್ಣಿಗೆ ಕಾಣಧಂಗೆ ಮಾಡ್ಕೊಳ್ಳೋದು. ಇವೆಲ್ಲಾ ನೋಡಿದರೆ ದೇವ್ರಿಲ್ಲಾಂತ......'

ಹೀಗೆ ವ್ಯಕ್ತಿಯ ವಿಶಿಷ್ಟ ಸಿದ್ಧಾಂತವನ್ನು ಹಿನ್ನೆಲೆಯಾಗಿಟ್ಟುಕೊಂಡು ಪ್ರತಿಯೊಂದು ಪಾತ್ರಕ್ಕೂ ಜೀವ ತುಂಬುವ ಪರಿಯನ್ನು ನಾವಿಲ್ಲಿ ಕಾಣಬಹುದು.

ಇಷ್ಟೆ ಮುಖ್ಯವಾಗಿ ನಮಗೆ ವೇದ್ಯವಾಗುವುದು ಕಾದಂಬರಿಯ 'ಅಥೆಂಟಿಸಿಟಿ.' ಇದು ಕಾಣುವುದು ಪುಟ್ಟ ಪುಟ್ಟ ಸಂಗತಿಗಳಲ್ಲಿ; ಅವುಗಳ ಸೂಕ್ಷ್ಮ ವಿವರಗಳಲ್ಲಿ. ಅಂದರೆ ಕಾದಂಬರಿ ನಿಜವಾಗುವುದು ಇಂಥ ಸಂಗತಿಗಳಲ್ಲೆ. ಜೇನು ಸಾಕಣೆಯನ್ನೇ ತೆಗೆದುಕೊಳ್ಳಿ, ಗುರುಗಿ ಹೂ, ಅದು ಎಂಟು ವರ್ಷಗಳಿಗೊಮ್ಮೆ ಹೂ ಬಿಡುವ ಸಂಗತಿ, ಸಿಹಿ ಹೆಚ್ಚಾಗಿ ಅದರ ತುಪ್ಪ ಹರಳುಕಟ್ಟುವ ಮಾಹಿತಿ. ಮಡಕೆ ಜೇನಿನ ವಿವರ, ಪೆಟ್ಟಿಗೆಗೆ ಜೇನನ್ನು ಕೂರಿಸುವ ವಿಧಾನ; ರಾಣಿ ಜೇನಿನ ಮಾರ್ಗ ದರ್ಶನ ಇತ್ಯಾದಿ. ಹಾಗೆಯೇ ಗದ್ದೆ ನಾಟಿಯ ವಿಚಾರ, ಭತ್ತದ ಗದ್ದೆಗೆ ಬೀಳುವ ಹುಳುಗಳ ವಿವರ– ಇವೆಲ್ಲ ಎಷ್ಟು ನಿಖರವಾಗಿವೆ ಎಂದರೆ ಈ ಉದ್ಯಮಗಳಲ್ಲಿ ತೊಡಗುವವರಿಗೆ ತಿಳುವಳಿಕೆ ನೀಡುವ ಪಾಠಗಳಂತಿವೆ. ಲೋಹಿಯಾ ಅವರ ತತ್ವ ಚಿಂತನೆಯ ಪ್ರಭಾವಕ್ಕೆ ಒಳಗಾದ ಬರಹಗಾರನೊಬ್ಬ ಗ್ರಾಮೀಣ ಭಾರತವನ್ನು ಕಂಡ, ಅನುಭವಿಸಿದ, ವಿವೇಚಿಸಿದ ಪುರಾವೆ ನಮಗಿಲ್ಲಿ ದೊರೆಯುತ್ತದೆ.

ತೇಜಸ್ವಿಯವರ ಜೀವನಾಸಕ್ತಿಯಂತೆಯೇ ಅವರ ವಿಜ್ಞಾನಾಸಕ್ತಿ–ಕುತೂಹಲಗಳೂ ಅಧ್ಯಯನ ವಿಷಯಗಳಾಗಬಲ್ಲವು. ನೀರಸ ವಸ್ತುವಿನಂತೆ ಜನ ಸಾಮಾನ್ಯರಿಂದ ದೂರ ಉಳಿದು ಬಿಡುವ ವೈಜ್ಞಾನಿಕ ಸತ್ಯಗಳು ಈ ಕಾದಂಬರಿಯಲ್ಲಿ ಗರಿಬಿಚ್ಚಿ ಹಾರುತ್ತವೆ. ಕರ್ವಾಲೋ ಹಲವು ಅದ್ಭುತಗಳನ್ನು ಬಲ್ಲ ವರ್ಣರಂಜಿತ ವ್ಯಕ್ತಿಯಾಗುತ್ತಾರೆ. ಅರ್ಥವಂತಿಕೆಯನ್ನು, ಜೀವಂತಿಕೆಯನ್ನು ಕಳೆದುಕೊಂಡ ವಸ್ತುವಾಗಬೇಕಾಗಿದ್ದ ಅವರ ಪ್ರಯೋಗಾಲಯ ಅದ್ಭುತಗಳ ವಿಸ್ಮಯಗಳ ಆಗರವಾಗುತ್ತದೆ. Fictionನಲ್ಲಿ ಬರುವ ಎಲ್ಲ ವೈಜ್ಞಾನಿಕ ಸಂಗತಿಗಳೂ ವೈಜ್ಞಾನಿಕ Facts ಆಗಬೇಕಾಗಿಲ್ಲ. ಆದರೆ ತೇಜಸ್ವಿಯವರ ವೈಜ್ಞಾನಿಕ ತಿಳುವಳಿಕೆ–ಚಿಂತನೆ–ತರ್ಕಗಳ ಹಿನ್ನೆಲೆಯಲ್ಲಿ ಇವು ವಿಜ್ಞಾನಿಗಳ ಕುತೂಹಲವನ್ನೂ ಕೆರಳಿಸಿ ಇದು Fact ಹೌದಾ ? ಎಂದು ಪ್ರಶ್ನಿಸುವಂತೆ ಮಾಡಿಬಿಡುತ್ತವೆ. ಹಾರುವ ಓತಿಯನ್ನೇ ತೆಗೆದುಕೊಳ್ಳಿ. ಇದು ಇರಬಹುದು ಇಲ್ಲದಿರಬಹುದು. ಆದರೆ ತೇಜಸ್ವಿ ವರ್ಣಿಸುವ ಜೀವ ವಿಕಾಸ ಪಥ ವೈಜ್ಞಾನಿಕ ಸತ್ಯ. ಈ ಹಾರುವ ಓತಿ ಉಳಿದ ಜೀವಿಗಳಂತೆ ವಿಕಾಸಗೊಳ್ಳದೆ

ತನ್ನ ಮೂಲ ಸ್ವರೂಪದ ಪಳೆಯುಳಿಕೆಯಂತೆ ಉಳಿದುಕೊಂಡಿರುವುದಕ್ಕೆ ತೇಜಸ್ವಿ ನೀಡುವ ಕಾರಣಗಳು ವೈಜ್ಞಾನಿಕ ಆಧಾರ ಪಡೆದವಾಗಿವೆ. ಹೀಗಾಗಿ ಈ ಸಂಗತಿ ಗಳು ವಿಜ್ಞಾನಿಗಳ ಆಸಕ್ತಿಯನ್ನೂ ಕೆರಳಿಸಿಬಿಡುತ್ತವೆ. ಇದಕ್ಕೆ ಒಂದು ಸಣ್ಣ ಉದಾಹರಣೆ ಕೊಡುವುದಾದರೆ– 'ಕರ್ವಾಲೋ' ಪ್ರಕಟಗೊಂಡ ಹೊಸತರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ವಿಜ್ಞಾನ ವಿಭಾಗದ ಸಂಶೋಧಕಿಯೊಬ್ಬರು ಆರರ ಮುಂದೆ ಒಂಬತ್ತು ಸೊನ್ನೆ ಹಾಕಿದಾಗ ಆಗಬಹುದಾದಷ್ಟು ವರ್ಷಗಳಷ್ಟು ಹಿಂದಿನದ್ದಿರಬಹುದಾದ ಹಾರುವ ಓತಿಯ ಬಗ್ಗೆ ತೇಜಸ್ವಿಯವರಿಗೆ ಕಾಗದ ಬರೆದು ಪ್ರಶ್ನಿಸಿದ್ದರು.

೪

ಮೇಲು ನೋಟಕ್ಕೆ ಕರ್ವಾಲೋ ಈ ಕಾದಂಬರಿಯ ನಾಯಕ ಪಾತ್ರದಂತೆ, ಕೇಂದ್ರ ವ್ಯಕ್ತಿಯಂತೆ ಕಂಡುಬರುತ್ತಾರೆ. ಆದರೆ ಕಾದಂಬರಿ ಬೆಳೆದಂತೆ ಮಂದಣ್ಣನ ಪಾತ್ರ ಮೈತುಂಬಿಕೊಳ್ಳುತ್ತಾ ಹೋಗಿ ಆತನ ವ್ಯಕ್ತಿತ್ವದ ವಿವಿಧ ಮುಖಗಳು ಬೆಳಗ ತೊಡಗಿ, ಮಂದಣ್ಣ ಕರ್ವಾಲೋ ಅವರ ಗುರುವಿನಂತೆ ಮುಖ್ಯ ಪಾತ್ರವಾಗಿ ಬಿಡುತ್ತಾನೆ. ವೈಜ್ಞಾನಿಕ ಭಾಷೆಯಲ್ಲಿ ಅಭಿವ್ಯಕ್ತಿಸುವ ಸಾಮರ್ಥ್ಯ ಇಲ್ಲದಿದ್ದರೂ ಮಂದಣ್ಣ ಪ್ರಕೃತಿಯ ಅನೇಕ ವಿಜ್ಞಾದ ವಿಸ್ಮಯಗಳನ್ನು ಬಲ್ಲ. ಕಾಡಿನಲ್ಲಿಯೇ ಹುಟ್ಟಿ ಬೆಳೆದ ಮಂದಣ್ಣನಿಗೆ ಗ್ಲೋವರ್ಮ್ ಆಗಲಿ, ಹಾರುವ ಓತಿಯಾಗಲಿ ಹೊಸ ಶೋಧಗಳಲ್ಲ; ತನ್ನ ಬದುಕಿನೊಂದಿಗೆ ಕಂಡುಕೊಂಡ ಸತ್ಯಗಳು. ಇಂಥ ಅನೇಕ ಸತ್ಯಗಳನ್ನು, ಅದ್ಭುತಗಳನ್ನು, ಪ್ರಕೃತಿ ವೈಚಿತ್ರ್ಯಗಳನ್ನು ಆತ ಬಲ್ಲ. ಆತನ ತಿಳುವಿನ ಪಾತಳಿ ದೊಡ್ಡದು. ನಾಗರಿಕ ಪರಿಸರದಲ್ಲಿ ಗೇಲಿಯ ವಸ್ತುವಾಗ ಬಲ್ಲ ಮಂದಣ್ಣ ಪ್ರಕೃತಿಯ ಸಾನ್ನಿಧ್ಯದಲ್ಲಿ ಒಬ್ಬ "ಅದ್ಭುತ ಪ್ರಕೃತಿ ಶಾಸ್ತ್ರಜ್ಞ." ಇದನ್ನು ಕರ್ವಾಲೋ ಅವರೇ ಹೇಳುತ್ತಾರೆ. ಹೀಗೆ ನಾವು ನಮ್ಮ ಆಸಕ್ತಿಯ ಕೇಂದ್ರವನ್ನು ಕರ್ವಾಲೋ ಅವರಿಂದ ಮಂದಣ್ಣನಿಗೆ ವರ್ಗಾಯಿಸುತ್ತೇವೆ. ಆದರೆ ಅದು ಅಲ್ಲಿಗೇ ನಿಲ್ಲುತ್ತದೆ ಎಂದು ಹೇಳಲು ಬರುವುದಿಲ್ಲ. ಯಾಕೆಂದರೆ ಬಿರ್ಯಾನಿ ಕರಿಯಪ್ಪ ಇದ್ದಾನೆ; ಹಾವು ಗೊಲ್ಲರ ಎಂಗ್ಟ ಇದ್ದಾನೆ. ಅವರು ಪ್ರಕೃತಿಯ ಸಖ್ಯದಲ್ಲಿ ಪಡೆಯುವ ಹನುಮದ್ವಿಕಾಸ ನಮ್ಮ ಆಸಕ್ತಿಯನ್ನು ಕೆರಳಿಸದೆ ಇರಲು ಹೇಗೆ ಸಾಧ್ಯ ? ಪರಿಣತಿ, ತಜ್ಞತೆ, ಚಾಕಚಕ್ಯತೆ ಎಲ್ಲ ಪದಗಳನ್ನು ಕೊಳ್ಳೆ ಹೊಡೆಯುವ ಅವರು ನಮ್ಮ ಆಸಕ್ತಿಯನ್ನೂ ಕಸಿದುಕೊಂಡು ಬಿಡುತ್ತಾರೆ. ಹೀಗೆ ವ್ಯಕ್ತಿಯಿಂದ ವ್ಯಕ್ತಿಗೆ ಸ್ಥಾನಪಲ್ಲಟ ಮಾಡುವ ನಮ್ಮ ಆಸಕ್ತಿ ನಿಜಕ್ಕೂ ಕೇಂದ್ರೀಕೃತ ವಾಗುವುದು ಹಾರುವ ಓತಿಯ ಮೇಲೆಯೇ.

ಒಂದು ಅರ್ಥದಲ್ಲಿ ಈ ಹಾರುವ ಓತಿ ಇಡೀ ಕಾದಂಬರಿಯನ್ನು ಆವರಿಸಿ ಕುಳಿತಿದೆ. ಈ ಓತಿಯ ಹುಡುಕಾಟವೇ ಈ ಕಾದಂಬರಿಯಲ್ಲಿ ಪ್ರಸ್ತಾಪಗೊಳ್ಳುವ

ಕಥೆಯ ಹಂದರ. ಕರ್ವಾಲೋ ನೇತೃತ್ವದ ಇಡೀ ಗುಂಪು ಬೆನ್ನು ಹತ್ತಿರುವುದು ಈ ಓತಿಯನ್ನೆ. ಇದು ಎಲ್ಲರನ್ನೂ ನಿಯಂತ್ರಿಸುತ್ತದೆ. ಕಾದಂಬರಿಗೆ ನಾಟಕೀಯತೆಯನ್ನು ತಂದುಕೊಡುತ್ತದೆ. ಕ್ಲೈಮ್ಯಾಕ್ಸನ್ನು ಕೂಡಾ ತಂದು ಕೊಡುವುದು ಇದೇ.

ಇದು ಪ್ರಾಚೀನತೆಯ ಪಳೆಯುಳಿಕೆ. ಕಾಲ ಪ್ರವಾಹದಲ್ಲಿ ಉಳಿದು ಬಂದ ಜೀವತಂತುವಿನ ಸಂಕೇತವೂ ಹೌದು. ಹಲವು ರಹಸ್ಯಗಳ ಕೇಂದ್ರದಂತೆ, ವಿಜ್ಞಾನದ ಅನೇಕ ವರ್ಷಗಳ ಸಾಧನೆಯನ್ನು ತಟಕ್ಕನೆ ಏರುಪೇರು ಮಾಡಬಲ್ಲ ಶಕ್ತಿಯನ್ನು, ರಹಸ್ಯಗಳನ್ನು, ಸಂಗತಿಗಳನ್ನು ಪಡೆದುಕೊಂಡಿರುವ ಜೀವಚರ. ಇದು ನಮ್ಮ ಪ್ರಜ್ಞೆ; ನಮ್ಮ ಕುತೂಹಲ; ನಮ್ಮ ದಿಗ್ಭ್ರಮೆಯೂ ಹೌದು; ನಮ್ಮ ತಿಳುವಳಿಕೆಯ ದಿಕ್‌ಸೂಚಿಯೂ ಹೌದು. ನಮ್ಮನ್ನು ಒಂದೇ ಜಿಗಿತಕ್ಕೆ ಕೋಟ್ಯಂತರ ವರುಷಗಳ ಹಿಂದಕ್ಕೆ ಒಯ್ಯುವ ಸಾಧನವೂ ಹೌದು. ಜೀವ ವಿಕಾಸದ ಹಾದಿಯಲ್ಲಿನ ಅನೇಕ ಸಂಗತಿಗಳನ್ನು ಬಿಚ್ಚುವ ಕಾಲಕೋಶವೂ ಹೌದು. ಅದು ನಮ್ಮ ವಿಜ್ಞಾನ; ನಮ್ಮ ಅಧ್ಯಾತ್ಮ ಕೂಡಾ. ಕುತೂಹಲವಾಗಿ ಕಾಣಿಸಿಕೊಂಡು ಬಿಡಿಸಲಾಗದ ನಿಗೂಢವಾಗಿ ಸಂಕೇತವಾಗುತ್ತ ಪ್ರತಿಮೆಯಾಗುತ್ತ ನಮ್ಮ ಪ್ರಜ್ಞೆಯೇ ಆಗುತ್ತ ನಮ್ಮ ವ್ಯಕ್ತಿತ್ವವನ್ನೇ ಆವರಿಸಿಬಿಡುವ, ನಿಯಂತ್ರಿಸಿ ಬಿಡುವ ಈ ಹಾರುವ ಓತಿ ಯಾವುದು ಹೌದು, ಯಾವುದು ಅಲ್ಲ ಎಂಬ ಸಂದಿಗ್ಧಕ್ಕೆ ನಮ್ಮನ್ನು ತಳ್ಳಿ, ಸಹ್ಯಾದ್ರಿಯ ಕೊಟ್ಟ ಕೊನೆಯ ಅಂಚಿನಿಂದ ಪ್ರಪಾತದ ಕಡೆಗೆ ಕುಪ್ಪಳಿಸಿ ನೀಲಿಯ ಅಸ್ಪಷ್ಟ ಶೂನ್ಯದಲ್ಲಿ ಲೀನವಾಗಿಬಿಡುತ್ತದೆ.

[ಮಂಗಳೂರಿನ 'ಭಾವನಗಂಗೋತ್ರಿ', 1986ರ ಜನವರಿಯಲ್ಲಿ ಏರ್ಪಡಿಸಿದ್ದ ಸಭೆಯಲ್ಲಿ ಓದಿದ ಲೇಖನ]

---

## ಭೀಕರ ಬರಗಾಲ ಎದುರಿಸಲು ವ್ಯಾಪಕ ಕಾರ್ಯಕ್ರಮ

## ಉದ್ಯೋಗ ಸೃಷ್ಟಿಯೊಂದಿಗೇ ಗ್ರಾಮೀಣ ಆಸ್ತಿ ನಿರ್ಮಾಣ

ಕರ್ನಾಟಕ ಸಮೃದ್ಧಿಯ ನಾಡು. ಅದು ಇಂದು ತಡೆಯಲಾಗದ, ಮರುಕಳಿಸಿದ ಭೀಕರ ಕ್ಷಾಮದಿಂದ ತತ್ತರಿಸುತ್ತಿದೆ. ನೈರುತ್ಯ ಹಾಗೂ ಈಶಾನ್ಯ ಮಾರುತಗಳ ಸತತ ವೈಫಲ್ಯದಿಂದಾಗಿ, ಈ ಪುಣ್ಯ ಭೂಮಿ ಕಳೆದ ನಾಲ್ಕು ವರ್ಷಗಳಿಂದ ವಿಪತ್ತಿನ ದವಡೆಯಲ್ಲಿ ಸಿಲುಕಿದೆ. ಇಡೀ ಗ್ರಾಮೀಣ ಬದುಕಿನ ಜೀವನಾಡಿಯನ್ನೇ ತಲ್ಲಣಗೊಳಿಸಿದೆ. ಹೆಚ್ಚೂ ಕಡಿಮೆ ಇಡೀ ರಾಜ್ಯ ಇದರ ಹೊಡೆತಕ್ಕೆ ಸಿಲುಕಿದೆ. ರಾಜ್ಯದ 175 ತಾಲ್ಲೂಕುಗಳಲ್ಲಿ 148 ತಾಲ್ಲೂಕುಗಳು, 27,028 ಹಳ್ಳಿಗಳ ಪೈಕಿ 20,496 ಹಳ್ಳಿಗಳು, 371 ಲಕ್ಷದಲ್ಲಿ 220 ಲಕ್ಷ ಜನತೆ, 150 ಲಕ್ಷದಲ್ಲಿ 110 ಲಕ್ಷ ಜಾನುವಾರು ಸಹಿತ ಪ್ರಕೃತಿಯ ವಿಕೋಪಕ್ಕೆ ಸಿಲುಕಿವೆ. ಬೇಸಾಯ ಕ್ಷೇತ್ರದಲ್ಲಿ ಶೇ : 47 ರಷ್ಟು ಮುಂಗಾರು ಬೆಳೆಯ ಪ್ರದೇಶಗಳು ಮತ್ತು ಶೇ : 66 ರಷ್ಟು ಹಿಂಗಾರು ಬೆಳೆಯ ಪ್ರದೇಶಗಳು ತೊಂದರೆಗೆ ಈಡಾಗಿವೆ; ಇದರ ಫಲವಾಗಿ ಆಹಾರದ ಉತ್ಪಾದನೆಯಲ್ಲಿ ಶೇ : 50 ರಷ್ಟು ನಷ್ಟವುಂಟಾಗಿದೆ. ಅದ್ದರಿಂದಲೇ ಸರ್ಕಾರ ಈ ಭೀಕರ ಬರಗಾಲದ ವಿರುದ್ಧ ಸಮರವನ್ನೇ ಸಾರಿದೆ. ಅದು ಅವಿರತವಾಗಿ ಎಲ್ಲ ಕ್ಷೇತ್ರಗಳಲ್ಲಿ ಹೋರಾಟ ನಡೆಸಿದೆ; ಕುಡಿಯುವ ನೀರು, ಆಹಾರ ಧಾನ್ಯ, ಮೇವು ಮುಂತಾದ ಜೀವನಾವಶ್ಯಕತೆಗಳು ಹಾಗೂ ಉದ್ಯೋಗ ಒದಗಿಸಲು ಆದ್ಯ ಗಮನ ನೀಡಿದೆ. ಇದರಿಂದಾಗಿ ಕೊಳವೆ ಬಾವಿಗಳು, ಕೆರೆಗಳು, ನೀರಾವರಿ ನಾಲೆಗಳು, ಗ್ರಾಮ ಸಂಪರ್ಕ ರಸ್ತೆಗಳು ಮತ್ತಿತರ ಶಾಶ್ವತ ಆಸ್ತಿಯೂ ನಿರ್ಮಾಣವಾಗುತ್ತಿವೆ.

### ಕೊಳವೆ ಬಾವಿಗಳು

ಹಳ್ಳಿಗಳಲ್ಲಿ ಕೊಳವೆ ಬಾವಿಗಳನ್ನು ತೋಡುವ ಕೆಲಸ ಶೀಘ್ರಗತಿಯಲ್ಲಿ ಸಾಗಿದೆ. ಕಳೆದ ನಾಲ್ಕು ವರ್ಷಗಳಲ್ಲಿ 41,000ಕ್ಕೂ ಹೆಚ್ಚು ಕೊಳವೆ ಬಾವಿಗಳನ್ನು ನಿರ್ಮಿಸಲಾಗಿದೆ. ಇದರಿಂದಾಗಿ, ಈವರೆಗ ರಾಜ್ಯದಲ್ಲಿ ಈಗ 92,500 ಕೊಳವೆ ಬಾವಿಗಳನ್ನು ನಿರ್ಮಿಸಿದಂತಾಗಿದೆ. ಇದು ಗ್ರಾಮೀಣ ಕರ್ನಾಟಕಕ್ಕೆ ಮಹತ್ವದ ಶಾಶ್ವತ ಆಸ್ತಿಯಾಗಿದೆ.

### ಶಾಶ್ವತ ಆಸ್ತಿ ಮತ್ತು ಗ್ರಾಮೀಣ ಉದ್ಯೋಗ

ಸರ್ಕಾರದ ನೆರವು ತಾತ್ಕಾಲಿಕ ಸಹಾಯ ಒದಗಿಸುವ ಕ್ರಮ ಮಾತ್ರವಲ್ಲ. ಬರಗಾಲ ಪೀಡಿತ ಪ್ರದೇಶಗಳ ಜನತೆಗೆ ಉದ್ಯೋಗ ಒದಗಿಸುವುದಲ್ಲದೇ ಆವಶ್ಯಕ ಆಸ್ತಿಗಳನ್ನು ನಿರ್ಮಿಸುವ ದೀರ್ಘಕಾಲೀನ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ.

ಅನೇಕ ರಚನಾತ್ಮಕ ಉದ್ಯೋಗಾವಕಾಶ ನೀಡುವ ಯೋಜನೆಗಳನ್ನು ಕೈಗೊಳ್ಳಲಾಗಿದೆ. ಹೊಸ ರಸ್ತೆಗಳ ನಿರ್ಮಾಣ, ಗ್ರಾಮ ಸಂಪರ್ಕ ರಸ್ತೆಗಳ ನಿರ್ಮಾಣ, ಭೂಸಂರಕ್ಷಣೆ, ಅರಣ್ಯಾಭಿವೃದ್ಧಿ, ಶಾಲೆ ಹಾಗೂ ಇತರ ಕಟ್ಟಡಗಳ ನಿರ್ಮಾಣ. ಈ ಕಾರ್ಯ ಕ್ರಮಗಳಿಂದ ಕೇವಲ ಕಳೆದ ಒಂದು ವರ್ಷದಲ್ಲಿಯೇ 160 ಕೋಟಿ ರೂ. ಗಳಿಗೂ ಹೆಚ್ಚಿನ ವೆಚ್ಚದಲ್ಲಿ, ಪ್ರತಿದಿನ ಸರಾಸರಿ 6 ಲಕ್ಷ ಜನರಿಗೆ ಗ್ರಾಮೀಣ ಉದ್ಯೋಗ ದೊರೆತಿದೆ. ತನ್ಮೂಲಕ ರಸ್ತೆಗಳು, ಶಾಲೆಗಳು ಮತ್ತು ಇತರ ಕಟ್ಟಡಗಳು ಮುಂತಾದ ಅಮೂಲ್ಯ ಆಸ್ತಿಗಳ ನಿರ್ಮಾಣವಾಗಿದೆ.

1985–86ರಲ್ಲೇ 870ಕ್ಕೂ ಹೆಚ್ಚು ನೀರಾವರಿ ನಾಲೆಗಳನ್ನು ತೋಡಲಾಗಿದೆ. ಅದರೊಂದಿಗೆ 1,500 ಹಳೆಯ ಕೆರೆಗಳ ದುರಸ್ತಿ ಹಾಗೂ 130 ಹೊಸ ಕೆರೆಗಳ ನಿರ್ಮಾಣ ಮಾಡಲಾಗಿದೆ. ಕರ್ನಾಟಕ ಹಳ್ಳಿಗಳಿಗೆ ಇದು ಅತ್ಯಾವಶ್ಯಕ ಕೊಡುಗೆ.

### ತುರ್ತು ಪರಿಹಾರ ಕ್ರಮಗಳು ಕುಡಿಯುವ ನೀರು, ಆಹಾರ ಧಾನ್ಯ, ಮೇವು

ದೈನಂದಿನ ಅವಶ್ಯಕತೆಗಳಾದ ಆಹಾರ ಧಾನ್ಯ, ಕುಡಿಯುವ ನೀರು, ಮತ್ತು ಮೇವು ಪೂರೈಕೆಗೆ ಹೆಚ್ಚಿನ ಗಮನ ನೀಡಲಾಗುತ್ತಿದೆ. 12,000ಕ್ಕೂ ಹೆಚ್ಚು ನ್ಯಾಯಬೆಲೆಯ ಅಂಗಡಿಗಳು; ಪ್ರತಿ ಕಿ.ಗ್ರಾಂಗೆ ರೂ. 1-50 ರಂತೆ ರಿಯಾಯಿತಿ ದರದಲ್ಲಿ ಆಹಾರ ಧಾನ್ಯಗಳ ವಿತರಣೆ; ಸಾವಿರಾರು ಜಾನುವಾರುಗಳಿಗೆ ಮೇವನ್ನೊದಗಿಸಲು ಗೋಶಾಲೆಗಳ ನಿರ್ಮಾಣ; ತೊಂದರೆಗೊಳಗಾದ ಜಿಲ್ಲೆಗಳಿಗೆ ರಾಜ್ಯದ ಅರಣ್ಯದಿಂದ 1,200 ಟನ್‌ಗಳಷ್ಟು ಮೇವು ವಿತರಣೆ, ಪಂಜಾಬ್, ಹರ್ಯಾಣ ಮತ್ತು ಉತ್ತರ ಪ್ರದೇಶಗಳಿಂದ ಗೋಧಿ ಹುಲ್ಲು ಮತ್ತು ಭತ್ತದ ಹೊಟ್ಟಿನ ಸಂಗ್ರಹ. ಇವೆಲ್ಲ ಈ ಸಂಕಷ್ಟದ ಪರಿಹಾರಕ್ಕಾಗಿ ಕರ್ನಾಟಕ ಸರ್ಕಾರವು ಕೈಗೊಂಡಿರುವ ತುರ್ತು ಕ್ರಮಗಳಲ್ಲಿ ಹಲವು.

**ಕ್ಷಾಮದ ವಿರುದ್ಧ ಸರ್ಕಾರದ ಅವಿರತ ಹೋರಾಟ ಮುಂದುವರೆದಿದೆ . . .**

**ಎರಡು ಕ್ಷೇತ್ರಗಳಲ್ಲಿ ತುರ್ತು ಪರಿಹಾರ ಉದ್ಯೋಗ ಸೃಷ್ಟಿ ಹಾಗೂ ಆಸ್ತಿ ನಿರ್ಮಾಣ**

**"ಕರ್ನಾಟಕ ವಾರ್ತೆ"**

